# ಪ್ರತಿಸ್ಪಂದ

ಏಪ್ರಿಲ್ 2013
ಸಂಪುಟ : 1 ಸಂಚಿಕೆ : 4

**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಮುಖಪುಟ ವಿನ್ಯಾಸ ಕೃಪೆ:**
ಅಂತರ್ಜಾಲ

**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆಯಿರಿ.

## ಒಳಪುಟಗಳಲ್ಲಿ

ಪುಟ ಸಂಖ್ಯೆ

# ನಿಮ್ಮೊಂದಿಗೆ ....

"You taught me Language;
And my profit on't is,
I know how to curse,
The red plague rid you
For learning me your language"
- Caliban in Shakespeare's Tempest

ವಸಹಾತೀಕರಣವನ್ನು ನೆನಪಿಸುವ ನವ-ವಸಾಹತೀಕರಣದ ಕಾಲದಲ್ಲಿ ನಾವು ವ್ಯವಹರಿಸುತ್ತಿದ್ದೇವೆ. "ಯಾವುದೇ ತರಹದ ismಗಳು, ತಪ್ಪು ತಿಳುವಳಿಕೆಗಳು ಮತ್ತು ಇತಿಹಾಸದ ಸಾವು" ಎಂದು Mortin Heidegger ವಿವರಿಸಿದ್ದರೂ ಸಹ ನಮ್ಮ ಸ್ಥಿತಿಯನ್ನು ವಿವರಿಸಿಕೊಳ್ಳಲು Neo-colonialism ಅನ್ನು ಅವಲಂಭಿಸುವುದು ತೀರಾ ಅವಶ್ಯಕವಾಗಿದೆ. ವಸಹಾತುಶಾಹಿ ಭಾಷೆ ಮತ್ತು ನಡತೆಯನ್ನು ನಾವು ಆರಿಸಿ ಕಳುಹಿಸುತ್ತಿರುವ ವರ್ಗ ಕರಗತಮಾಡಿಕೊಂಡಿದೆ. ಹೊಸದಾಗಿ ಮತ್ತೆ ವಸಹಾತು ಶೋಷಣೆಯ ಕ್ರಮಗಳನ್ನು ತಮ್ಮದಾಗಿಸಿಕೊಳ್ಳುತ್ತಿದೆ. ಜೀವಪೋಷಕ ಸಂಸ್ಕೃತಿಗಳು ಅಂದರೆ ಒಂದು ಕಾಲದಲ್ಲಿ ಸಮೃದ್ಧ ಬದುಕಿಗೆ ಅನುಕೂಲವಾಗಿದ್ದ ಜೀವನ ವಿಧಾನಗಳು ಧನದಾಹದ ಧಗೆಗೆ ಸಿಕ್ಕಿ ಬದಲಾಗುತ್ತಿವೆ.

ಅಸ್ಮಿತೆಗಳು ಉಳಿಯುವುದು ಅಥವಾ ದಾಖಲಾಗುವುದು ಜವಬ್ಧಾರಿಗಳ ಸಶಕ್ತ ನಿರ್ವಹಣೆಯಿಂದ. ಅಸ್ತಿತ್ವವಾದಿ ಸಾಹಿತಿಗಳಾದ ಕಮು, ಕಾಫ್ಕಾ ತಮ್ಮ ಕಥೆ/ಕಾದಂಬರಿಗಳಲ್ಲಿನ ಪಾತ್ರಗಳಿಗೆ ಇರುವ ಮುಖ್ಯವಾದ ಸಮಸ್ಯೆ ಜವಾಬ್ಧಾರಿಯನ್ನು ಹೊರಬೇಕೋ ಬೇಡವೋ? ಎಂಬ ಜಿಜ್ಞಾಸೆಯಲ್ಲಿದೆ ಎಂದು ಗುರುತಿಸುತ್ತಾರೆ. ನಾವೂ ಕೂಡ ಅಚಿತಹ ಅಸ್ತಿತ್ವವಾದಿ ಸಮಸ್ಯೆಯಲ್ಲಿ ಸಿಕ್ಕಿಹಾಕಿಕೊಂಡಿದ್ದೇವೆ. ಸಮರ್ಪಕ ಆಳ್ವಿಕೆಗಾಗಿ ಪ್ರಶ್ನಿಸುವ ಧೋರಣೆ, ಅನ್ಯಾಯಕ್ಕೆ ಅಸಹನೆ ತೋರಿಸುವ ಜವಬ್ದಾರಿಯನ್ನು ಕುರಿತು ಮಾತಾಡದೇ, ಚರ್ಚಿಸದೇ, ಎಲ್ಲಿಯವರೆಗೆ ಕಂಡರೂ ಕಾಣದ ಹಾಗೆ ನಟಿಸುತ್ತಾ ಸ್ವ-ವಂಚನೆಯಲ್ಲಿ ಬದುಕುತ್ತಾ ಹೋಗುತ್ತೇವೆಯೋ ಅಲ್ಲಿಯವರೆಗೂ ನಮ್ಮ identity prove ಆಗುವುದಿಲ್ಲ. ನಮ್ಮ ಅಸ್ತಿತ್ವಕ್ಕೆ ಬೆಲೆ ಬರುವುದಿಲ್ಲ.

ನಮ್ಮ ದುರಹಂಕಾರಿ/ದರ್ಪಿಷ್ಟ ನಾಯಕರಂತೆ ನಾವೂ ಸಹ ಅವರ ಭಾಷೆಯನ್ನೇ ಅನುಸರಿಸುವುದರಿಂದ ವಸಾಹತುಶಾಹಿಯ ಬಂಧನಗಳು ಮತ್ತಷ್ಟು ಬಿಗಿಯಾಗುತ್ತವೆ. ಈ ಸ್ಥಿತಿಯನ್ನು ಪಲ್ಲಟಗೊಳಿಸಲು ಜವಬ್ಧಾರಿಯುತ ಮತದಾನ ಅನೇಕ ಮಾರ್ಗಗಳಲ್ಲಿ ಒಂದು.

ಇಂತಹ ಅವಶ್ಯಕವಾದ ಜವಬ್ಧಾರಿಗಳನ್ನು ನೆನಪಿಸುವುದು ಸಾಹಿತ್ಯದ ಮುಖ್ಯ ಉದ್ದೇಶ. ಕುವೆಂಪು ಹೇಳುವ ಹಾಗೆ ವಿಚಾರ ಕ್ರಾಂತಿಯಿಂದ ಮಾತ್ರವೇ ಜಾತಿ ಮೌಢ್ಯವನ್ನು ಅಳಿಸಲು ಸಾಧ್ಯ. ಜಾತಿ ವ್ಯವಸ್ಥೆಯು ಅಸಮಾನತೆಯ ಬೇರುಗಳನ್ನು ಆಳವಾಗಿಸಿ, ಮನುಷ್ಯರ ನಡುವೆ ಬೇಧದ ಬಿರುಕುಗಳನ್ನು ದಟ್ಟವಾಗಿಸುತ್ತದೆ. ಅಸಹಜವಾದ ಜಾತಿ ಸಂಬಂಧಗಳು ಕೀಳರಿಮೆಯನ್ನು ಹೆಚ್ಚಿಸುತ್ತವೆ; ಆತ್ಮವಿಶ್ವಾಸದಿಂದ ಮುನ್ನಡೆಯದಂತೆ ಕಟ್ಟಿ ಹಾಕುತ್ತವೆ. ಜಾತಿ ಆಧಾರದ ಮೇಲೆ ಚುನಾಯಿತರಾದವರೂ ಸಹ ಹಾಗೆಯೇ ನಡೆದುಕೊಳ್ಳುತ್ತಾರೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮತ್ತೆ ಕೆಲವಷ್ಟು ವರ್ಷ ಬದುಕಲು ಅವಕಾಶ ಮಾಡಿಕೊಳ್ಳೋಣ, ವಂದನೆಗಳು.

– ಸಂಪಾದಕ

ಹೇಡಿಗಳು ಅನೇಕ ಸಲ ಸಾಯುತ್ತಾರೆ ಆದರೆ
ಧೈರ್ಯಶಾಲಿಗಳು ಸಾಯುವುದು ಒಂದೇ ಸಲ – ಷೇಕ್ಸ್‌ಪಿಯರ್

| ಪ್ರಸ್ತುತ | ಶೇಕ್ಸಪಿಯರ್ ನ ಕಿಂಗ್ ಲಿಯರ್ ಮತ್ತು ಹ್ಯಾಮ್ಲೆಟ್ ನಾಟಕಗಳಲ್ಲಿ ಸ್ತ್ರೀ ಸಂವೇದನೆ |
|---|---|

# ಶೇಕ್ಸಪಿಯರ್ ನ ಕಿಂಗ್ ಲಿಯರ್ ಮತ್ತು ಹ್ಯಾಮ್ಲೆಟ್ ನಾಟಕಗಳಲ್ಲಿ ಸ್ತ್ರೀ ಸಂವೇದನೆ

Ben Johnson ಪ್ರಕಾರ ಷೇಕ್ಸ್‌ಪಿಯರ್ ಒಂದು ಕಾಲಕ್ಕೆ ಸೇರಿದ ಬರಹಗಾರನಲ್ಲ, ಈತನ ನಾಟಕಗಳು ಸಾರ್ವತ್ರಿಕ ಹಾಗು ಸಾರ್ವಕಾಲಿಕ. ಪ್ರತಿಯೊಂದು ಕಾಲವೂ ತನ್ನದೇ ಆದ ಕಲ್ಪನಾಶಕ್ತಿಯಿಂದೆ ಷೇಕ್ಸ್‌ಪಿಯರ್ ನನ್ನು ಪರಿಶೀಲಿಸುತ್ತಿದೆ ಹಾಗು ಈ ಪರಿಶೀಲನಾ ಪ್ರಕ್ರಿಯೆಯು ಪರಿಚಲನೆಯಿಂದ ಕೂಡಿರುತ್ತದೆ. ಇಂದು ಪ್ರಚಲಿತದಲ್ಲಿರುವ ವಿಮರ್ಶಾ ಕ್ರಮಗಳಾದ New Historicism, Marxism, Post-colonialism, Modern ಮತ್ತು Postmodern ನೆಲೆಯಲ್ಲಿ ವಿಮರ್ಶಕರು ಸಮಕಾಲೀನ ಸಂದಿಗ್ಧ ಬದುಕಿಗೆ ಷೇಕ್ಸ್‌ಪಿಯರ್ ನ ಪ್ರಸ್ತುತತೆಯನ್ನು ಕಾಣಲು ತೊಡಗಿದ್ದಾರೆ. ಪ್ರಸ್ತುತ ಲೇಖನವು ಷೇಕ್ಸ್‌ಪಿಯರ್ ನ ರಾಜ ಲಿಯರ್ ಮತ್ತು ಕುಮಾರ ಹ್ಯಮ್ಲೆಟ್ ನಾಟಕಗಳಲ್ಲಿ ಸ್ತ್ರೀ ಸಂವೇದನೆಯನ್ನು ಗುರುತಿಸಲು ಪ್ರಯತ್ನಿಸುತ್ತದೆ.

ಷೇಕ್ಸ್‌ಪಿಯರ್ ನ ಸ್ತ್ರೀ ಮತ್ತು ಪುರುಷ ಪಾತ್ರಗಳು ತಾಯಿ-ತಂದೆಯರ ಬದುಕಿನ ಬೆಳವಣಿಗೆಯಲ್ಲಿನ ಸಾಮರಸ್ಯವನ್ನು ಪ್ರತಿನಿಧಿಸುವುದರಲ್ಲಿ ಸಶಕ್ತವಾಗಿದೆ ಎಂದು ಸ್ತ್ರೀವಾದಿ ಚಿಂತಕರು ತಿಳಿದಿದ್ದಾರೆ. ಅವನ ವಸ್ತುನಿಷ್ಠ-ಸಂಬಂಧ-ಸಿದ್ಧಾಂತವನ್ನು ಬಹುವಾಗಿ ಮೆಚ್ಚುತ್ತಾರೆ. Adelman ಎಂಬ ವಿಮರ್ಶಕ King Lear ನಲ್ಲಿ ತಾಯಿಯ ಪಾತ್ರದ ಕೊರತೆ ಮತ್ತು ಆಕೆಯ ಅನುಪಸ್ಥಿತಿಯನ್ನು ತಿಳಿಸುತ್ತಾ ಹ್ಯಾಮ್ಲೆಟ್ ನಾಟಕದಲ್ಲಿನ ಉಸಿರುಗಟ್ಟಿಸುವ ತಾಯಿ (Gertrude) ಪಾತ್ರದ ಉಪಸ್ಥಿತಿಯ ವ್ಯತ್ಯಾಸಗಳನ್ನು ಮತ್ತದರ ಪರಿಣಾಮಗಳನ್ನು ಗುರುತಿಸುತ್ತಾನೆ. ಈ ಎರಡೂ ನಾಟಕಗಳ ಸಂದರ್ಭದಲ್ಲಿ 'ಸ್ತ್ರೀ'ಪಾತ್ರದ ಅನಿವಾರ್ಯತೆ ಮತ್ತು ಅಪ್ರಸ್ತುತತೆಯ ಸಾಧಕ-ಬಾಧಕಗಳು ನಾಟಕಗಳ ಬೆಳವಣಿಗೆಯನ್ನು ಸಂಕೀರ್ಣಗೊಳಿಸುತ್ತವೆ. ತಾಯಿಯ ಪವಿತ್ರ ಪ್ರೀತಿ ಮತ್ತು ಆರೈಕೆಗಾಗಿ ಪರಿತಪಿಸಿ ವಂಚಿತನಾದ ಹ್ಯಾಮ್ಲೆಟ್ ನ ಬದುಕಿನ ಹೆಜ್ಜೆಗಳು ಭಾರವಾಗತೊಡಗುತ್ತವೆ. ಗಾಯ್ತನವನ್ನು ಮತ್ತು ಆಕೆಯ ಸ್ಥಾನವನ್ನು ದುರುಪಯೋಗ ಪಡಿಸಿಕೊಂಡ ತನ್ನ ತಾಯಿ Gertrude ಹೆಣ್ಣಿನ ಜಾಯಮಾನಕ್ಕೆ ಕಳಂಕವೆಸದದ್ದನ್ನು ಕಂಡ ಹ್ಯಾಮ್ಲೆಟ್ ತನ್ನ ಸ್ವಗತವೊಂದರಲ್ಲಿ "Frailty thy name is woman" ಎಂದು ಜರಿಯುತ್ತಾನೆ.

ರಾಜ ಲಿಯರ್ ಗೆ 'ಸ್ತ್ರೀ' ಮತ್ತು 'ಪುರುಷ' ಪಾತ್ರಗಳೆರಡನ್ನೂ ತಾನೇ ಏಕಕಾಲಕ್ಕೆ ನಿರ್ವಹಲೆತ್ನಿಸುವುದು ಅನಿವಾರ್ಯವಾಗುತ್ತದೆ. ಹಾಗೆಯೇ ತಾಯಿಯ ಪ್ರೀತಿ, ಆರೈಕೆ, ನಿರ್ವಹಣೆ ಮತ್ತು ಸುಸಂಸ್ಕೃತ ಮೌಲ್ಯಗಳ ಕೊರತೆಯಿಂದ ಬೆಳೆದು ಹಿಡಿತ ತಪ್ಪಿದ ಲಿಯರ್ ನ ಮಕ್ಕಳಾದ Goneril ಮತ್ತು Regan ರನ್ನು ಕಾಣಬಹುದು. ಇಲ್ಲಿ ಲಿಯರ್ ತಾಯಿಯಿಲ್ಲದ ತನ್ನ ಮಕ್ಕಳಿಗೆ ತಾಯಿಯ ಸ್ಥಾನವನ್ನು ತುಂಬುವಲ್ಲಿ ಸೋಲುತ್ತಾನೆ. ತಂದೆಯಾಗಿ, ತಾಯಿಯಾಗಿ ಎರಡೂ ಪಾತ್ರಗಳನ್ನು ಸಮರ್ಪಕವಾಗಿ ಅವನಿಂದ ಸಮ್ಮಿಲನಗೊಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಹೆಣ್ಣಿನ ಪ್ರೀತಿ ಮತ್ತು ಆರೈಕೆಯ ಕೊರತೆಯಿಂದ ಲಿಯರ್ ತನ್ನ ಮಕ್ಕಳಲ್ಲಿ ಈ ಕೊರತೆಯನ್ನು ನೀಗಿಸಿಕೊಳ್ಳಲು ತಂದೆಯ ಸ್ಥಾನದಲ್ಲಿ ವ್ಯವಹರಿಸುತ್ತಾನೆ. ಲಿಯರ್ ನ ಕಿರಿಯ ಮಗಳಾದ ಮಾತೃಹೃದಯದ Cordelia ಮಾತ್ರ ತನ್ನ ತಂದೆಯ ಕೊರತೆಯನ್ನು ಅವಳ ವ್ಯಕ್ತಿತ್ವದಿಂದ ನೀಗಿಸಲು ಪ್ರಯತ್ನಿಸುತ್ತಾಳೆ.

ರಾಜ ಲಿಯರ್ ತನ್ನ ಹಿರಿಯ ಮಕ್ಕಳಾದ ಗೊನೆರಿಲ್ ಮತ್ತು ರಿಗಾನ್ ರ ನೀಚತನವನ್ನು ಅರ್ಥಮಾಡಿಕೊಳ್ಳಲು ವಿಫಲನಾಗುತ್ತಾನೆ. ಸ್ತ್ರೀ ಸಂವೇದನೆಯನ್ನು ಪೂರ್ಣವಾಗಿ ಅನುಸಂಧಾನ ಮಾಡಿಕೊಂಡಿರದ ಲಿಯರ್ ಇಳಿವಯಸ್ಸಿನಲ್ಲಿ ತನ್ನ ಮೂರೂ ಹೆಣ್ಣು ಮಕ್ಕಳ ಪ್ರೀತಿಯನ್ನು ಕೊಂಡು-ಕೊಳ್ಳುವ ಸರಕಿನಂತೆ (commodity) ವ್ಯವಹರಿಸಿ ಪ್ರೀತಿಯ ಅಳತೆಗೋಲನ್ನು ನಿರ್ಧರಿಸುತ್ತಾನೆ ಮತ್ತು ಪ್ರಮಾಣೀಕರಿಸುತ್ತಾನೆ. ಹೆಣ್ಣಿನ ಒಲವು ಮತ್ತು ಪೋಷಣೆಯಿಂದ ವಂಚಿತನಾಗಿರುವುದರಿಂದ

ವೃದ್ಧಾಪ್ಯದಲ್ಲಿ ವ್ಯಾಕುಲನಾಗುತ್ತಾನೆ. 80 ವರ್ಷಗಳ ದೀರ್ಘಾವಧಿ ಬದುಕನ್ನು ಸವೆಸಿದ್ದರೂ ಪ್ರಬುದ್ಧನಾಗಿರುವುದಿಲ್ಲ. ಅಪ್ರಬುದ್ಧತೆ ಮತ್ತು ಅವಿವೇಕ ಈತನಲ್ಲಿ ಎದ್ದು ಕಾಣುವ ಅಂಶವಾಗಿದೆ. ಲಿಯರ್ ತನ್ನ ಕುರುಡುತನದಲ್ಲಿ ಉತ್ತಮ ರಾಜನಾಗದೆ, ತಂದೆಯೂ ಆಗದೆ ಬಿಕಾರಿಯಾಗುತ್ತಾನೆ, ಹುಚ್ಚನಾಗುತ್ತಾನೆ. ಪ್ರಕೃತಿಯ ಪ್ರೀತಿಯ ಅಪ್ಪುಗೆಯಲ್ಲಿ, Cordelia ಳ ಪರಿಶುದ್ಧತೆಯ ಚಿಕಿತ್ಸೆಯಲ್ಲಿ ತನ್ನಲ್ಲಿದ್ದ ಕುರುಡುತನ ಮತ್ತು ಅಪ್ರಬುದ್ಧತೆಯಿಂದ ಗುಣಮುಖನಾಗುತ್ತಾನೆ.

ಹಾಗೆಯೇ Goneril, Regan ಮತ್ತು Cordelia ಸ್ತ್ರೀ ಪಾತ್ರಗಳಲ್ಲಿ ಪುರುಷ ಸಂವೇದನೆಯ ಹೆಚ್ಚಳವೂ ಬಹುತೇಕ ನಾಟಕದುದ್ದಕ್ಕೂ ಕಂಡು ಬರುವ ಮತ್ತೊಂದು ಅಂಶವಾಗಿದೆ. Cordelia ತನ್ನ ಅಕ್ಕಂದಿರಿಗಿಂತ ಭಿನ್ನ. ಈಕೆಯ ವ್ಯಕ್ತಿತ್ವ ಸಹಜವಾಗಿದೆ. ಲಿಯರ್ ತನ್ನ ಮೂರು ಹೆಣ್ಣು ಮಕ್ಕಳಲ್ಲಿ ಕಿರಿಯವಳಾದ Cordelia ಳಿಂದ ಅಧಿಕ ಪ್ರೀತಿಯನ್ನು ಅಪೇಕ್ಷಿಸಿರುತ್ತಾನೆ ಮತ್ತು ನೀಡಿರುತ್ತಾನೆ. ಈಕೆಯೂ ಸಹ ತನ್ನ ತಂದೆಯಲ್ಲಿ ತಾಯಿಯ ವಾತ್ಸಲ್ಯವನ್ನು ಕಂಡುಕೊಂಡಿರುವುದರಿಂದ ಅವಳಲ್ಲಿ ಪೂರ್ಣ ಪ್ರಮಾಣದ ವ್ಯಕ್ತಿತ್ವವು ಬೆಳವಣಿಗೆಯಾಗಿರುತ್ತದೆ. "I love you as daughter of a father" ಎಂದು ತನ್ನ ಪ್ರೀತಿಯನ್ನು ವ್ಯಕ್ತಪಡಿಸಿದಾಗ ಸಹಜ ವ್ಯಕ್ತಿತ್ವ, ನೇರನುಡಿ, ಸ್ವಾಭಿಮಾನ ಮತ್ತು ಗಾಂಭೀರ್ಯ ದ ಮೌಲ್ಯಗಳು ಅವಳ ವ್ಯಕ್ತಿತ್ವದಲ್ಲಿ ಪ್ರತಿಬಿಂಬಿಸುತ್ತವೆ. ತಾಯಿಯ ಸಹನೆ ಮತ್ತು ಪ್ರೀತಿಯನ್ನು ತಂದೆಯಲ್ಲೇ ಕಂಡುಕೊಂಡ Cordelia ತನ್ನ ತಂದೆಗೆ ಇಳಿಯ ವಯಸ್ಸಿನಲ್ಲಿ ತಾಯಿಯ ಪ್ರೀತಿಯನ್ನು ಉಣಿಸಿ ತಣಿಸುತ್ತಾಳೆ.

ಷೇಕ್ಸ್‌ಪಿಯರ್ ನ ಹ್ಯಾಮ್ಲೆಟ್ ಮತ್ತು ಕಿಂಗ್ ಲಿಯರ್ ಈ ಎರಡೂ ನಾಟಕಗಳು ದುರಂತವಾಗಲು 'ಹೆಣ್ಣಿನ ಅನಿವಾರ್ಯತೆ ಮತ್ತು ಆಯ್ಕೆಯ ಸಾಮರಾಸ್ಯದ ನಿರ್ವಹಣೆಯ ಕೊರತೆ' ತೀವ್ರವಾಗಿ ಕಾರಣವಾಗುತ್ತದೆ. ಮಾನವ ಬದುಕಿನಲ್ಲಿ ಸ್ತ್ರೀ ಸಂವೇದನೆಯು ಪ್ರಮುಖ ಮತ್ತು ಅನಿವಾರ್ಯ ಎಂಬುದನ್ನು ಈ ಎರಡೂ ನಾಟಕಗಳು ತೆರೆದಿಡುತ್ತವೆ.

– ಶ್ರೀನಿವಾಸಪ್ಪ

| ಕವನ | ಪರಸೇರಲೇನು ಗಳಿಕೆ? |
|---|---|

ಯಾರೋ ಕರೆದ ದನಿ
ದನಿಯಲ್ಲಿ ದಣಿವಿರಲು
ದಣಿದ ಜೀವವು
ಜೀವಜಾಲದೊಳಗಾಗಿ
ಜಾಲದಿಂ ಬೇರ್ಪಡಲು ತವಕಿಸಿದೆ.

ಎಂತು ಬಂದೆವು ಇಹಕೆ?
ಇಹದ ಜಂಜಡ ಬಿಡದೆ
ಜಡವಾದ ಜೀವನಕೆ
ಅರ್ಥವಿದೆಯೇ?

ಅರ್ಥ ಹುಡುಕುವ ಆಟ
ಆಟಕಿದೆಯೇ ಸೂತ್ರ?
ಸೂತ್ರ ಹಿಡಿದಿರುವಾತ ಯಾರೋ? ಹರಿಯೇ?
ಹರಿಯ ಕಾಣುವ ಪರಿಯೆ
ಪಾತ್ರ ಪೋಷಣೆ ಸರಿಯೇ?
ಈ ಪಾತ್ರ ಪರಸೇರಲೇನು ಗಳಿಕೆ?

–ರಾಮು ಟಿ.ಡಿ.
9880951125
tdramu.td@gmail.com

# Roland Barthes ನ ವಿಶ್ಲೇಷಣಾ ನೆಲೆಯಲ್ಲಿ Edger Allen Poe ನ ಸಣ್ಣಕತೆ *'The Facts in the Case of M.Valdemer'* (ಭಾಗ-3)



ಕಥಾ ವಿಶ್ಲೇಷಣೆಯ ಮುಂದುವರೆದ ಭಾಗ.........

ನಾಲ್ಕನೇ ಹಂತ:- ಕರಾರು- ಸಾವಿನ ಹೊಸ್ತಿಲಿನಲ್ಲಿರುವ M.ವ್ಲಾಡಿಮಿರನಿಗೆ ವಶೀಕರಣ ಮಾಡುವ ಆಹ್ವಾನವನ್ನು ವಿಜ್ಞಾನಿ P ಕೊಟ್ಟಾಗ ಆತನು ಅದನ್ನು ಒಪ್ಪಿಕೊಳ್ಳುತ್ತಾನೆ. ಪ್ರಯೋಗಶೀಲ ವಿಜ್ಞಾನಿ ಹಾಗು ರೋಗಿಯ ನಡುವೆ ಕರಾರಾಗುತ್ತದೆ, ನಿಯಮ, ಸಂಪ್ರದಾಯಗಳ ಒಪ್ಪಿಗೆ, ಮುಂದುವರೆಯುವ ನಿರ್ಧಾರ, ಔಪಚಾರಿಕವಾದರೂ/ಕಾನೂನು ಬದ್ಧ ನೋಂದಣಿ (ಡಾಕ್ಟರರ ಉಪಸ್ಥಿತಿಗಳು) ಆಗುತ್ತವೆ.

ಐದನೇ ಹಂತ:- ಜ್ಞಾನ ಇಲ್ಲದಿರುವ ಅವಸ್ಥೆ- M.ವ್ಲಾಡಿಮೀರನ ಅಂತಿಮ ಕ್ಷಣಗಳು ಬಂದುಬಿಟ್ಟಿವೆ ಹಾಗು ಪ್ರಯೋಗ ನಡೆಸುವ ವಿಜ್ಞಾನಿ P ಯನ್ನು ರೋಗಿಯೇ ಕರೆಸಿಕೊಂಡಿದ್ದಾನೆ. P ರೋಗಿಯ ಮೇಲೆ ಕರಾರಿನಂತ articulo mortisನಲ್ಲಿ ವಶೀಕರಣ ಪ್ರಾರಂಭಿಸುತ್ತಾನೆ. ಈ ಕ್ರಿಯಾನುಕ್ರಮಣಿಕೆಯನ್ನು Catalepsy ಎಂದು ಕರೆಯಬಹುದು. ಇಲ್ಲಿ ವಶೀಕರಣದ ಆಯಸ್ಕಾಂತದ ನಿಲುಗಡೆಗಳು, ರೋಗಿಯಿಂದ ಪ್ರತಿರೋಧಗಳು, ವಿಜ್ಞಾನಿಯಿಂದ ಗಮನಿಸುವಿಕೆ, ಡಾಕ್ಟರರಿಂದ ಮರುಪರಿಶೀಲನೆ ಎಲ್ಲವನ್ನೂ ಒಳಗೊಂಡಿದೆ.

VI. ಪ್ರಶ್ನಾವಳಿ ಒಂದು:- ಭಾನುವಾರ ಬೆಳಗಿನ 3 ಗಂಟೆಗೆ ವಿಜ್ಞಾನಿಯು 4 ಬಾರಿ ವ್ಲಾಡಿಮೀರನನ್ನು ಸಂದರ್ಶಿಸಿದನು. ಮೊದಲನೆ ಪ್ರಶ್ನೆಗೆ ಉತ್ತರ 'ನಾನು ಮಲಗಿದ್ದೇನೆ'

VII. ಪ್ರಶ್ನಾವಳಿ ಎರಡು:- ಈ ಪ್ರಶ್ನೆಗೆ ಉತ್ತರ 'ನಾನು ಸಾಯುತ್ತಿದ್ದೇನೆ'.

ಈ ಬಿಂದುವಿನಿಂದ ಮತ್ತೆ ಕಥೆಯ ಕೊನೆಭಾಗದ lexis ಗಳ ವಿಶ್ಲೇಷಣೆಯನ್ನು ಬಾರ್ತಸನು ಪ್ರಾರಂಭಿಸುತ್ತಾನೆ. 101 ಹಾಗು 102 lexis ಗಳಲ್ಲಿ ವಿಶ್ಲೇಷಣೆಗೆ ಮುಂಚೆ ವ್ಲಾಡಿಮೀರನ ಸ್ಥಿತಿ ಏನೆಂದರೆ, ಆತನು ವೈದ್ಯಕೀಯ ಸಾವು ಹೊಂದಿದ್ದಾನೆ ಆದರೆ ವಶೀಕರಣದಲ್ಲಿದ್ದಾನೆ.

ವ್ಲಾಡಿಮಿರನು ಸಾವು ಹೊಂದಿದಾಗ ಕಥೆ ಮುಕ್ತಾಯವಾಗಬೇಕಾಗಿತ್ತು, ಆದರೆ ತರ್ಕಯುಕ್ತವಾದ ಅಂತೆ ಕಂತೆ ಮಾತಿನಿಂದ ಕಥೆಗಾರ ವಿವರಣಾತ್ಮಕ ಅವಶ್ಯಕತೆಯ್ನನುಂಟುಮಾಡಿ ಸಣ್ಣ ಕಥೆ ಇದ್ದಕ್ಕಿದ್ದ ಹಾಗೆ ಶುರುವಾಗುತ್ತದೆ. ಇಲ್ಲಿಂದ ಮುಂದಕ್ಕೆ ಸಂಖ್ಯೆಗಳಲ್ಲಿ ಗುರುತಿಸಿರುವ lexis ಗಳು Poe's ಸಣ್ಣ ಕತೆಯಿಂದ ಆಯ್ದ ಭಾಗಗಳು ಹಾಗು ಅದರಡಿಯಲ್ಲಿ ಬರುವುದು ಬಾರ್ತನ ವಿಶ್ಲೇಷಣೆ.

103 "ನನಗನ್ನಿಸುವುದೇನೆಂದರೆ ಕಥಾವಿವರಣೆಯ ಈ ಹಂತದಲ್ಲಿ ಪ್ರತಿಯೊಬ್ಬ ಓದುಗನೂ ಆಶ್ಚರ್ಯ ಹೊಂದಿ ಸಕಾರಾತ್ಮಕ ಅಪನಂಬಿಕೆ ಹೊಂದುತ್ತಾನೆ. ನನ್ನ ಉದ್ದೇಶ ಕಥೆಯನ್ನು ಮುಂದುವರೆಸುವುದಷ್ಟೇ"

ಇಂತಹ ಘೋಷಣೆಯಿಂದ Poeನು ಒಂದು ಅಲಂಕಾರಿಕ ಭಾಷಾ ನೈಪುಣ್ಯದ, ವಾಕ್ಚಾತುರ್ಯದ ಸಂಕೇತವನ್ನು ಕೊಟ್ಟಂತಾಗಿ ಇಂತಹ ವಾಕ್ಯಗಳು ಓದುಗರ ಆಸಕ್ತಿಯನ್ನು ಹೆಚ್ಚಿಸುತ್ತವೆ.

ಈ lexis ವಸ್ತುನಿಷ್ಠತೆಯನ್ನು ತೋರಿಸುತ್ತಾ ವೈಜ್ಞಾನಿಕ ಸಂಕೇತವನ್ನು ಪ್ರತಿಫಲಿಸುತ್ತದೆ.

(104) "M.ವ್ಲಾಡಿಮಿರನಲ್ಲಿ ಕಿಂಚಿತ್ತೂ ಜೀವಕಳೆ ಇಲ್ಲದ್ದನ್ನು ನೋಡಿ, ಆತನು ಸಾವನ್ನಪ್ಪಿರುವನೆಂದು ತೀರ್ಮಾನಿಸಿ ದಾದಿಯರಿಗೆ ವಹಿಸಿಕೊಟ್ಟೆವು"..

ಈ lexis ನಲ್ಲಿ ಮೊದಲು ತಿಳಿಸಿದ ವ್ಲಾಡಿಮೀರನ ವೈದ್ಯಕೀಯ ಸಾವನ್ನು ಖಚಿತ ಪಡಿಸಿಕೊಳ್ಳಲಾಯಿತು.

(105) "ಕೂಡಲೆ ಒಂದು ಬಲವಾದ ನಡುಗುವ ಚಲನೆಯನ್ನು ನಾಲಿಗೆಯಲ್ಲಿ ಗಮನಿಸಿದೆವು, ಇದು ಸುಮಾರು ಒಂದು ನಿಮಿಷದವರೆಗೂ ಮುಂದುವರೆಯಿತು".

ಪ್ರತಿಯೊಬ್ಬರಲ್ಲೂ ದೇವರಿರುತ್ತಾನೆ ಆಗಂತ ಪ್ರತಿಯೊಬ್ಬ ಮನುಷ್ಯನೂ ದೇವರೆಂದು ಅರ್ಥವಲ್ಲ. ಆ ಕಾರಣದಿಂದಲೇ ನಾವು ಕಷ್ಟಕ್ಕೆ ತುತ್ತಾಗುತ್ತೇವೆ. - ಪರಮಹಂಸ

(A) "ಒಂದು ನಿಮಿಷ" ಈ ಕಾಲುನುಕ್ರಮಣಿಕೆಯ ಸಂಕೇತವು ಎರಡು ಪರಿಣಾಮಗಳನ್ನು ತೋರುತ್ತದೆ ಮೊದಲನೆಯದ್ದು ಸತ್ಯಸ್ಥಿತಿಯನ್ನು ವಿವರಿಸುತ್ತಿದ್ದು, ಎರಡನೆಯದ್ದು ನಾಟಕೀಯ ಬೆಳವಣಿಗೆಯನ್ನು ತೋರಿಸುವುದು, ಪ್ರಯಾಸದಿಂದ ವ್ಲಾಡಿಮೀರನ ಕೂಗು ಅವನ ಸಾವು ಬದುಕಿನ ಹೋರಾಟವನ್ನು ಬಿಂಬಿಸುತ್ತದೆ. ಜೀವ ಸಾವಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತದೆ.

(B) ಈಗಾಗಲೇ ವಿಜ್ಞಾನಿ Poyu M. ವ್ಲಾಡಿಮೀರನನ್ನು ಸಂದರ್ಶಿಸಿ ಮೂರು ಪ್ರಶ್ನೆಗಳನ್ನು ಕೇಳಿ ಆಗಿದೆ. ನಾಲ್ಕನೇ ಪ್ರಶ್ನೆಗೆ ಉತ್ತರ ಮುಗಿದಿಲ್ಲ. M.ವ್ಲಾಡಿಮಿರನ ನಾಲಿಗೆಯ ಚಲನೆಯು ಆತನು ಮಾತನಾಡುವನೆಂಬುದನ್ನು ಸೂಚಿಸುತ್ತದೆ.

(C) ನಾಲಿಗೆಯು ಚಲನೆಯು ಮಾತನ್ನು ಸಂಕೇತಿಸುತ್ತದೆ. ನಾಲಿಗೆಯೇ ಮಾತು (ನಾಲಿಗೆಯನ್ನು ಕತ್ತರಿಸುವುದು ಮಾತನ್ನು ನಿಲ್ಲಿಸಿದ ಹಾಗೆಯೇ, ದೇವ ದೂಷಣೆ ಮಾಡಿದವರಿಗೆ ಇಂಥದ್ದೇ ಶಿಕ್ಷೆಯನ್ನು ಕೊಡಲಾಗುತ್ತಿತ್ತು. ಹಾಗೆಯೆ ನಾಲಿಗೆಯನ್ನು ಶಿಶ್ನಕ್ಕೆ ಹೋಲಿಸಲಾಗುತ್ತದೆ.

ನಾಲಿಗೆಯು ಒಂದು ಅಂಗ. ಅದರ ಚಲನೆ ಉದ್ರೇಕದ ಮುಂಚಿನ ಸ್ಥಿತಿಯನ್ನು ಸಂಕೇತಿಸುತ್ತದೆ. ಒಂದು ನಿಮಿಷದವರೆಗೆ ನಡೆಯುವ ಚಲನೆ Pre-orgasm ನ ಸ್ಥಿತಿಯನ್ನು, ಹಾಗು ವ್ಲಾಡಿಮೀರನಿಗೆ ಏನೋ ಉದ್ದೇಶವಿರುವುದನ್ನು ಸಂಕೇತಿಸುತ್ತದೆ. ಸಾಮಾನ್ಯವಾಗಿ ಚಲಿಸುವ ನಾಲಿಗೆ ವೈದ್ಯಕೀಯ ಸಾವನ್ನು ಸೂಚಿಸುವ ಕಫ ಬಾತ ನಾಲಿಗೆಗೆ ವ್ಯತಿರಿಕ್ತವಾಗಿದೆ.

(106) "ಅಲ್ಲಿ ಚಲನೆಯಿಲ್ಲದ ದವಡೆಗಳಿಂದ ಒಂದು ಧ್ವನಿ ಹೊರಟಿತು".

ಇಲ್ಲಿ ವ್ಲಾಡಿಮಿರನಿಂದ ಹೊರಡುವ ಧ್ವನಿ ನಾಲಿಗೆಯಿಂದ ಬಂದಿದ್ದು, ದವಡೆಗಳು ಬಾಗಿಲುಗಳಷ್ಟೇ. ಧ್ವನಿ ಹಲ್ಲಿನಿಂದ ಬಂದದ್ದಲ್ಲ ಬದಲಾಗಿ ಆಂತರಿಕವಾದದ್ದು, ದೈಹಿಕವಾದದ್ದು, ಮತ್ತು ಬಲಿಷ್ಟವಾದದ್ದಾಗಿದೆ. ಸಂಸ್ಕೃತಿ, ಯಾವಾಗಲೂತೀಕ್ಷ್ಣವಾದ, ಸ್ಪಷ್ಟವಾದ ಧ್ವನಿಗಳನ್ನು ಆರಾಧಿಸುತ್ತದೆ ಹೊಗಳುತ್ತದೆ/ಒಪ್ಪಿಕೊಳ್ಳುತ್ತದೆ. ಆದರೆ ಸಾವಿನ ಧ್ವನಿ, ಆಂತರಿಕ ಆಳದಿಂದ, ಜಿಗುಟಾಗಿ ಅಂಟು ಅಂಟಾಗಿ ಹೊರಟಿರುತ್ತದೆ. ಹಾಗಾಗಿ ನಮಗೆ ಧ್ವನಿ ಸಾಂಕೇತಿಕ ಅರ್ಥ ನೀಡುತ್ತದೆ.

(107) "ಇಂತಹ ವೃತ್ತಾಂತವನ್ನು ವಿವರಿಸುವ ಪ್ರಯತ್ನ ಮಾಡುವುದು ಹುಚ್ಚುತನವಾಗಬಹುದು". ವ್ಲಾಡಿಮಿರ್‌ನ ಮಾತಿಗೆ ಎರಡು ಅಥವ ಮೂರು ಗುಣವಾಚಕಗಳನ್ನು ಪರಿಗಣಿಸಬಹುದು. ಮೊದಲನೆಯದು ಧ್ವನಿ ಬಹಳ ಒರಟಾಗಿದ್ದು, ಒಡೆದಿತ್ತು ಮತ್ತು ಟೊಳ್ಳಾಗಿತ್ತು. ಆದರೆ ಅದರ ಗೂಢತ್ವ ಮಾತ್ರ ವಿವರಿಸಲಸಾಧ್ಯವಾದದ್ದು. ಏಕೆಂದರೆ ಇಂತಹ ಸಮವಾದ ಧ್ವನಿಯನ್ನು ಮನುಕುಲದ ಕಿವಿಗಳು ಇದುವರೆಗೂ ಕೇಳಿಲ್ಲ".

ಈ Lexis ನಲ್ಲಿ ವಿವರಣಾತ್ಮಕ ಸಂಕೇತವು ಓದುಗರಿಗೆ ವ್ಲಾಡಿಮಿರನ ಮಾತಿನ ಮೇಲೆ ಅವಲಂಬಿತವಾದ ಕಥೆಯ ವಿಶೇಷತೆಯನ್ನು ಸಾರುತ್ತದೆ. ಭಾಷಾಶಾಸ್ತ್ರದ ಜ್ಞಾನದಿಂದ ತೆಗೆದಿರುವ ಪದಗಳು (epithets) ವಿವರಿಸಲಾರದಂಥಹ ಆಸಕ್ತಿಯನ್ನು ಓದುಗರಲ್ಲಿ ಮುಂದುವರೆಸುತ್ತವೆ.

ಧ್ವನಿಯು ಸಾಂಕೇತಿಕ ಅರ್ಥಗಳನ್ನು ಸೃಷ್ಟಿಸುತ್ತದೆ. ನಮಗೆ ಧ್ವನಿಯು ಎರಡು ಗುಣಗಳನ್ನು ಸೂಚಿಸುತ್ತದೆ. ಮೊದಲನೆಯದು ಧ್ವನಿಯ ಆಂತರಿಕ ಗುಣ, ಎರಡನೆಯದ್ದು ಧ್ವನಿಯು ತಡೆ ತಡೆದು ಹಾಗು ಅಂಟು ಅಂಟಾಗಿ ಬರುವ ಗುಣ. ಆಂತರ್ಯದಿಂದ ಬರುವ ಧ್ವನಿಯಿಲ್ಲಿನ ದೂರ ಹಾಗು ಅಂತರದ ನಡುವೆ ತರ್ಕಬದ್ಧವಾದ ವೈರುಧ್ಯಗಳು ಧ್ವನಿಗೆ ಅಲೌಕಿಕ ಗುಣವನ್ನು ಕೊಡುತ್ತದೆ.

(108) "ಧ್ವನಿಯಲ್ಲಿ ಒಂದು ವಿಧವಾದ ಅಲೌಕಿಕ ಗುಣ ಇದೆ ಎಂದು ಹೇಳಲು ಎರೆಡು ಲಕ್ಷಣಗಳಿವೆ. ಉಚ್ಚಾರಣೆಯ ಮೊದಲನೆಯದು ಧ್ವನಿ ಬಹಳ ದೂರದಿಂದ ಬಂದಿದೆಯೇನೋ ಅನ್ನುವ ರೀತಿಯಲ್ಲಿ ಅಥವ ಆಳವಾದ ಪ್ರಪಾತದಿಂದ ಬಂದಿದೆಯೇನೋ ಅನಿಸುತ್ತಿತ್ತು. ಎರಡನೆಯದ್ದು, ಜಿಗುಟಾಗಿರುವ ಪದಾರ್ಥವನ್ನು ಮುಟ್ಟಿದರೆ ಆಗುವಂಥ ಅನುಭವ ಈ ಧ್ವನಿಯನ್ನು ಹೇಳಿದಾಗ ಆಗುತ್ತಿತ್ತು. ನಾನು ನಿಮಗೆ ಸರಿಯಾಗಿ ಅರ್ಥಮಾಡಿಸಬಲ್ಲೆನೆ ಅನ್ನುವ ಭಯ ನನ್ನಲ್ಲಿ ಉಂಟಾಗುತ್ತಿದೆ".

(A) ಈ Lexis ನಲ್ಲಿ ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದ ಸಂಕೇತಗಳು ಹಾಗು ವಿವರಣಾತ್ಮಕ ಸಂಕೇತಗಳು ಇವೆ.

(B) ಧ್ವನಿಯ ಸಂಕೇತದ ವಿಸ್ತಾರ ಹೆಚ್ಚಾಗುತ್ತದೆ (1) 'ಧ್ವನಿ ದೂರದಿಂದ ಬಂದಿದೆ' ಅನ್ನುವ Poeನ ವಿವರಣೆಯಿಂದ, ಸಾವು ಬದುಕಿನ ನಡುವಿನ ಅಂತರವನ್ನು ಸಂಕೇತವಾಗಿ ತೋರಿಸಲಾಗಿದೆ. ಧ್ವನಿಯ ವಿಚಿತ್ರತೆ ಸಾವನ್ನು ಸಂಕೇತಿಸಿದರೆ, ಧ್ವನಿಯೇ ಜೀವದ ಸಂಕೇತ, ಹಾಗಾಗಿ ಸತ್ಯ ಹಾಗು ಕಥೆ ಎರಡೂ ಕಥೆಯಲ್ಲಿ ಮಿಳಿತವಾಗಿವೆ. ಸಾವು ಮತ್ತು ಜೀವ ಎರಡೂ ಒಂದನ್ನೊಂದು ಅತಿಕ್ರಮಿಸಿವೆ. (2) "ಧ್ವನಿ ಪಾತಾಳದಿಂದ ಬಂದಂತಿದೆ" ಧ್ವನಿಯು ಅರ್ಥಗಳು ಇಮ್ಮಡಿಯಾಗಿ ವಿರುದ್ಧ ದಿಕ್ಕಿನಲ್ಲಿವೆ. ಕೆಲವು ಬಾರಿ ವ್ಲಾಡಿಮಿರನ ಧ್ವನಿ ಹಕ್ಕಿಯಂತೆ ಹಗುರವಾಗಿದೆ, ಜೀವದಿಂದ ಹಕ್ಕಿಯ ಹಾಗೆ ಹಾರುತ್ತಿದೆ. ಕೆಲವು ಬಾರಿ ಅದು ಭಾರವಾದ, ಕಂದಕದ ಆಳದಿಂದ ಬಂದಂತಿದೆ, ಇಂಥಹ ಧ್ವನಿಯು ಕಲ್ಲಿಗೆ ಕಟ್ಟಿಹಾಕಿದ ಹಾಗೆ ನಿಲ್ಲುತ್ತದೆ (3) "ಭಾಷೆ ಬಿಟ್ಟು ಬಿಟ್ಟು ಬರುತ್ತದೆ ಜಿಗುಟು ಜಿಗುಟಾಗುತ್ತದೆ".- ಇದು ಅತಿ ಮಾನುಷ ಪರಿಣಾಮವನ್ನು ತಂದುಕೊಡುವಲ್ಲಿ ಸಹಾಯ ಮಾಡುತ್ತದೆ. ವಿಚಿತ್ರತೆಯನ್ನು ಒತ್ತಿಹೇಳುತ್ತದೆ. ಇದು ಭಾಷೆಯ ವಿನ್ಯಾಸಕ್ಕೇ, ವಿರುದ್ಧವಾದದ್ದು, ಜೊತೆಗೆ ಇಂತಹ ಧ್ವನಿ ಅಸ್ಪಸ್ಥತೆಯ ಸಾಕ್ಷಿಯಾಗುತ್ತದೆ.

ವ್ಲಾಡಿಮಿರನ ಸನ್ನಿಹಿತವಾಗಿರುವ ಸ್ಪಷ್ಟ ಉಚ್ಚಾರಣೆಯು ಪೂರ್ಣ, ವಯಸ್ಕ ಭಾಷೆಯಂತೆ ತೋರುತ್ತದೆ. ತೊದಲುವಿಕೆಯಾಗಲಿ, ನುಂಗಿದಂತ ಉಚ್ಚಾರಣೆಗಳಾಗಲಿ, ಕೀಳು ಮಟ್ಟದ ಪದಪ್ರಯೋಗವಾಗಲಿ ಇಲ್ಲ. ಹಾಗಾಗಿ ಭಯ, ಮತ್ತು ಭೀತಿ ಹುಟ್ಟಿಸುತ್ತದೆ. ಭಾಷೆ ಹಾಗು ಸಾವಿನ ನಡುವೆ ಎದ್ದು ಕಾಣುವ ವೈರುಧ್ಯವಿದೆ. ಜೀವದ ವಿರುದ್ಧವಾಗಿರುವುದು ಸಾವಲ್ಲ (ಬದಲಾಗಿ ಭಾಷೆ). ಈ ಭಾಷೆಯಿಂದ ವ್ಲಾಡಿಮಿರನು ಜೀವಂತವಾಗಿದ್ದಾನೋ, ಸತ್ತಿದ್ದಾನೋ ಅನ್ನುವುದು ಅಸ್ಪಷ್ಟ, ತೀರ್ಮಾನಿಸಲಾಗದ ವಿಷಯ. ಒಂದೇ ನಿಶ್ಚಿತವಾದ ವಿಷಯವೆಂದರೆ ಅವನು ಮಾತನಾಡುತ್ತಾನೆ. ಆತನ ಧ್ವನಿಯನ್ನು ಸಾವೋ ಅಥವ ಜೀವವೋ ಅನ್ನುವುದನ್ನು ಉಲ್ಲೇಖಿಸಲಾಗುವುದಿಲ್ಲ.

"ನಾನಾಗ ಹೀಗೆ ಯೋಚಿಸಿದೆ ಹಾಗೂ ಈಗಲೂ ಯೋಚಿಸುತ್ತೇನೆ"

ಈ ವಾಕ್ಯದಲ್ಲಿ ಸಮಯದ ಸಂಕೇತವಿದೆ. ಮೂರು ಸಮಯಗಳು ಈ Lexis ನಲ್ಲಿ ಅಸ್ತಿತ್ವದಲ್ಲಿವೆ. ಮೊದಲನೆಯದು ಕಥೆ ನಡೆದ ಸಮಯ, ಎರಡನೆಯದು ಕತೆಗಾರ ಕಥೆ ಬರೆಯುವ ಸಮಯ, ಮೂರನೆಯದು ನಾವು ಓದುಗರು ಓದುವ ಸಮಯ ಈ ಎಲ್ಲಾ ಸಮಯಗಳು ಕಥೆಗೆ ವಾಸ್ತವಿಕತೆಯ ಪರಿಣಾಮವನ್ನು ನೆರವೇರಿಸುತ್ತದೆ.

(110) "ವ್ಲಾಡಿಮೀರನು ಹೇಳಿದ ಹೌದು ಇಲ್ಲ - ನಾನಿನ್ನೂ ನಿದ್ರಿಸುತ್ತಿದ್ದೇನೆ, ಮತ್ತು ಈಗ- ನಾನು ಸತ್ತೆ". ವಿನ್ಯಾಸದ ದೃಷ್ಟಿಯಿಂದ ಈ Lexis ಸರಳವಾದದ್ದು. ಇದು Mr.P. (ವಿಜ್ಞಾನಿ) ಕೇಳಿದ ಮೂರನೆಯ ಪ್ರಶ್ನೆಯ ಪುನರಾವರ್ತನೆ ನಾಲ್ಕನೆ ಪ್ರಶ್ನೆ "ನೀನು ಇನ್ನೂ ಮಲಗಿದ್ದೀಯೊ?" ಅನುವುದಕ್ಕೆ "ನಾನು ಸತ್ತೆ" ಅನ್ನುವ ವಾಕ್ಯದ ಗೂಡಾರ್ಥಲ್ಲೆ ಎಣೆಯಿಲ್ಲದಷ್ಟು ಶ್ರೀಮಂತವಾದದ್ದು.

ನಾವೀಗಾಗಲೇ ನೋಡಿದ ಹಾಗೆ ಸಾವು ಮತ್ತು ಬದುಕಿನ ನಡುವೆ ಅತಿಕ್ರಮಣ ಆಗಿದೆ. ಜೀವ ಅಥವ ಸಾವಿನ ನಡುವೆ ಸ್ಪಷ್ಟವಾದ ವಿರೋಧವಿದೆ. ಆದರೆ ಇಲ್ಲಿ ಜೀವ ಹಾಗು ಸಾವಿನ ವಿಷಯದಲ್ಲಿ ಅತಿಕ್ರಮವಾಗಿದೆ. ಹಾಗಾಗಿ ಸಾವು ಹಾಗು ಜೀವದ ನಡುವಿನ ಬೇರ್ಪಡಿಕೆ ನಾಶವಾಗಿದೆ. ಈ ಅತಿಕ್ರಮ ಪ್ರವೇಶ ಭಾಷೆಯ ಹಂತದಲ್ಲಿ ಆಗುತ್ತದೆ. ಒಮ್ಮೆ ಸತ್ತ ಮನುಷ್ಯ ಆತ್ಮದ ರೂಪದಲ್ಲಿ ತನ್ನ ಪ್ರತೀಕಾರ ತೀರಿಸಿಕೊಳ್ಳುತ್ತಾನೆ. ಅನ್ನುವುದು ಮಹಾನ್ ಮರಾಣಕಥೆಗಳಲ್ಲಿ ಹಾಗು ಸೇಡಿನ ಪ್ರತೀಕಾರದಂತಹ ಕತೆಗಳಲ್ಲಿ ಹೇಳಿರುವುದು ಸಾಮಾನ್ಯವಾಗಿ ಕಂಡುಬರುವ ವಿಷಯ. ಈ ಕಥೆಯಲ್ಲಿ ಸತ್ತ ಮನುಷ್ಯ ಮಾಡುವ ಕ್ರಿಯೆ ಬರೀ ಭಾಷೆಯ ಕ್ರಮ. ಇಂಥ ಭಾಷೆ ಯಾವ ಉದ್ದೇಶವನ್ನು; ಯಾರ ಮೇಲಿನ ಹಗೆ ತೀರಿಸಿಕೊಳ್ಳುವುದನ್ನೂ ಬಿಂಬಿಸುವುದಿಲ್ಲ. ಈ ಭಾಷೆಯ ಕ್ರಮ ಭಾಷೆಗೆ ಮಾತ್ರ ಸೀಮಿತವಾದಂಥದ್ದು. ಈ ಭಾಷೆಗೆ ಭಾಷೆಯ ಅರ್ಥವನ್ನು ತಿಳಿಸುವುದು ಬಿಟ್ಟು ಹೆಚ್ಚಿನ ಉದ್ದೇಶವಿಲ್ಲ. ಹಾಗಾಗಿ ಆತ ಏನು ಹೇಳಿದನೋ

ಅನ್ನುವುದು ವ್ಲಾಡಿಮಿರನ ಹಗರಣದ, ಹರಟೆಯ ಭಾಗವಷ್ಟೇ. ಇನ್ನೊಂದು ಪೋ ಸೃಷ್ಟಿಸುವ ಆಶ್ಚರ್ಯಕರ ವಿಷಯವೆಂದರೆ ಸಾವಿನ ಒಂದು ರೂಪಕವನ್ನು ವಾಚ್ಯಾರ್ಥಕ್ಕೆ ಬದಲಿಸುವುದಾಗಿದೆ.

"ನಾನು ಸತ್ತೆ" ಅನ್ನುವ ಭಾಷಾ ಪ್ರಯೋಗ shopping ಮಾಡಿ ಸುಸ್ತಾದ ಮಹಿಳೆ ಹೇಳುವ ಹಾಗೆ ಇದೆ. ಇನ್ನೊಂದು ಹಗರಣದ ವಿಷಯವೆಂದರೆ ಈ ವಾಕ್ಯದ ಅರ್ಥ ಯಾವುದೇ ವ್ಯಾಖ್ಯಾನದ ಹಂತದಲ್ಲಿಲ್ಲ. ಈ ವಾಕ್ಯದಲ್ಲಿ 'ನಾನು' ಮತ್ತು 'ಸತ್ತೆ' ವಸ್ತುಗಳಿಗೆ ಸಂಬಂಧ ಅಸಾಧ್ಯ. ಇಂಥದೊಂದು ಶೂನ್ಯ ಸ್ಥಳಕ್ಕೆ ಕಥೆ ಮುಟ್ಟುತ್ತದೆ ಮತ್ತು ಆಕ್ರಮಿಸಿಕೊಳ್ಳುತ್ತದೆ. ಈ ವಾಕ್ಯದಲ್ಲಿ ಅದರ ವಾಚ್ಯಾರ್ಥ ಬಿಟ್ಟು ಗೂಡಾರ್ಥ ಯಾವುದೂ ಇಲ್ಲ. ಅದರ ವಿವರಣೆ ಬಿಟ್ಟು, ಹೆಚ್ಚಿನ ಸಂದೇಶವನ್ನು ವಾಕ್ಯ ಕಳಿಸುವುದಿಲ್ಲ. ಹಾಗಾಗಿ ಈ ವಾಕ್ಯವನ್ನು ಲೇಖಕನ ಉದ್ದೇಶವನ್ನು ನೆರವೇರಿಸುವ Lexis ಎನ್ನಬಹುದು. (ಯಾವ ಉಚ್ಚಾರಣೆ ತನ್ನ ನಿರೂಪಣೆಯನ್ನು ಮಾತ್ರ ಉದ್ದೇಶಿಸುತ್ತದೊ ಮತ್ತು ನಿಶ್ಚಿತವಾಗಿ ಪ್ರತಿಪಾದಿಸುವುದಿಲ್ಲವೋ ಅದನ್ನು Performative ಅನ್ನುತ್ತೇವೆ)

'ನಾನು ಸತ್ತೆ' ಅನ್ನುವ ವಾಕ್ಯ ಒಂದೇ ಬಾರಿಗೆ ಎರಡು ವೈರುಧ್ಯಗಳನ್ನು ಪ್ರತಿಪಾದಿಸುತ್ತದೆ. ಒಂದು ಸಾವು ಇನ್ನೊಂದು ಜೀವ. ಈ ವಾಕ್ಯ ಸುಳ್ಳೂ ಅಲ್ಲ, ಸತ್ಯವೂ ಅಲ್ಲ. ನಾನು ಸತ್ತೆ ಎನ್ನುವ ಈ ಮಾತನ್ನಾಡುವಾಗ ನಾನಿನ್ನೂ ಬದುಕಿದ್ದೇನೆ- ಎನ್ನುವುದನ್ನು ಅರ್ಥೈಸುತ್ತದೆ. ನಾನು ಸತ್ತಿದ್ದೇನೆ ಹಾಗು ನಾನು ಸತ್ತಿಲ್ಲ- ಇಲ್ಲಿ ದೃಢೀಕರಣ ಹಾಗು ನಿರಾಕರಣೆ ಎರಡೂ ಇದೆ. ಇದು ನಾವು ಇದುವರೆಗೂ ಕೇಳಿಲ್ಲದ ವರ್ಗಕ್ಕೆ ಸೇರುತ್ತದೆ. (ಸತ್ಯ/ಮಿಥ್ಯ, ಹೌದು/ಇಲ್ಲ, ಸಾವು/ಬದುಕು ಇಂತಹ ವೈರುಧ್ಯಗಳ ವರ್ಗ)

ಈ ವಾಕ್ಯ ಆಶ್ಚರ್ಯಕರವಾದ ವಾಚ್ಯಾರ್ಥದ ಪುನರಾಗಮನವನ್ನು ಸಾರುತ್ತದೆ. ಹೀಗೆಂದರೆ ಸಾವು ನಮ್ಮ ಅರಿವಿನ ಸುಪ್ತಾವಸ್ಥೆಗೆ ತಳ್ಳಲ್ಪಟ್ಟಿದ್ದು, ಭಾಷೆಯ ಮೂಲಕ ಉಕ್ಕಿ ಪ್ರಕಟಪಡಿಸುತ್ತದೆ. ಹೀಗೆ ಪ್ರಕಟಗೊಳ್ಳುವ ಸಾವು ಗಾಯಗೊಂಡಿದೆ (traumatic) ಕೊನೆಯಲ್ಲಿ ವ್ಲಾಡಿಮಿರನು 'ಸಾವು' ಎಂದು ತನ್ನ ನಾಲಿಗೆಯಿಂದ ಒದರುತ್ತಾನೆಯೇ ಹೊರತು ತುಟಿಗಳಿಂದಲ್ಲ. ನಾನು ಸತ್ತೆ ಎನ್ನುವ ಪ್ರಯೋಗ ಒಂದು ನಿಷೇಧವನ್ನು ಪ್ರತಿಬಂಧವನ್ನು ಸಿಡಿಸುತ್ತದೆ ಮತ್ತು ಸಾವಿನ ಸಂಕೇತವನ್ನು ಮುಚ್ಚಿ ಒಂದು ಮನೋವಿಕಾರದ ಬಾಗಿಲನ್ನು ತೆರೆಯುತ್ತದೆ. ಈ ಮನೋರೋಗ ಹಿಂದಿನ ಸೂಚಕ (Significer ನ್ನು ಹೊಚ್ಚ ಹೊಸ ಸೂಚಿತವನ್ನಾಗಿಸುತ್ತದೆ) (Signified)

ಕೊನೆಯಲ್ಲಿ ಕಥೆ ರೋಗಿಯ ಬಾಯಿಂದ 'ಸತ್ತೆ ಸತ್ತೆ' ಅನ್ನುವ ಪದಗಳೊಂದಿಗೆ ಮುಕ್ತಾಯದ ಹಂತಕ್ಕೆ ಬರುತ್ತದೆ. ತಕ್ಷಣವೇ ಆತನ ದೇಹ Mr.Pನ (ವಿಜ್ಞಾನಿ) ಕೃತಿಯಿಂದ ತಪ್ಪಿಸಿಕೊಂಡು ಚೂರು ಚೂರಾಗಿ ಕೊನೆಯಲ್ಲಿ ಕುರೂಪದ, ಕೊಳೆತ, ನಾರುವ ಒಂದು ದ್ರವವಾಗುತ್ತದೆ.

– ಕೆ.ಬಿ.ಜ್ಯೋತಿ

jyogowdev@gmail.com

**ವಿಶೇಷ ಸೂಚನೆ**

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಂಶದಲ್ಲಿ ಟೈಪ್ ಮಾಡಿ prathispandha@gmail.comಗೆ ಕಳುಹಿಸುವುದು.

ಇಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ವಿಚಾರಗಳಿಗೆ ಲೇಖಕರೇ ಜವಾಬ್ದಾರರು

ಲೇಖನಗಳನ್ನು ಕಳುಹಿಸುವ ಲೇಖಕರು ಓದುಗರ ಅನುಕೂಲಕ್ಕಾಗಿ ಹೆಸರು, ವಿಳಾಸ, ದೂರವಾಣಿ ಸಂಖ್ಯೆ, ಇ-ಮೇಲ್ ವಿಳಾಸವನ್ನು ನೀಡತಕ್ಕದ್ದು.

ಶಿಕ್ಷಣ ಎಂಬುದು ನಮಗೆ ಏನು ತಿಳಿದಿರುವುದಿಲ್ಲವೋ ಅದನ್ನೇ ಮುಖ್ಯವಾಗಿ ಹೊಂದಿರುತ್ತದೆ. – ಮಾರ್ಕ್‌ಟ್ವೇನ್

ಅನ್ನುವುದು ವ್ಲಾಡಿಮಿರನ ಹಗರಣದ, ಹರಟೆಯ ಭಾಗವಷ್ಟೇ. ಇನ್ನೊಂದು ಮೋ ಸೃಷ್ಟಿಸುವ ಆಶ್ಚರ್ಯಕರ ವಿಷಯವೆಂದರೆ ಸಾವಿನ ಒಂದು ರೂಪಕವನ್ನು ವಾಚ್ಯಾರ್ಥಕ್ಕೆ ಬದಲಿಸುವುದಾಗಿದೆ.

"ನಾನು ಸತ್ತೆ" ಅನ್ನುವ ಭಾಷಾ ಪ್ರಯೋಗ shopping ಮಾಡಿ ಸುಸ್ತಾದ ಮಹಿಳೆ ಹೇಳುವ ಹಾಗೆ ಇದೆ. ಇನ್ನೊಂದು ಹಗರಣದ ವಿಷಯವೆಂದರೆ ಈ ವಾಕ್ಯದ ಅರ್ಥ ಯಾವುದೇ ವ್ಯಾಖ್ಯಾನದ ಹಂತದಲ್ಲಿಲ್ಲ. ಈ ವಾಕ್ಯದಲ್ಲಿ 'ನಾನು' ಮತ್ತು 'ಸತ್ತೆ' ವಸ್ತುಗಳಿಗೆ ಸಂಬಂಧ ಅಸಾಧ್ಯ. ಇಂಥದೊಂದು ಶೂನ್ಯ ಸ್ಥಳಕ್ಕೆ ಕಥೆ ಮುಟ್ಟುತ್ತದೆ ಮತ್ತು ಆಕ್ರಮಿಸಿಕೊಳ್ಳುತ್ತದೆ. ಈ ವಾಕ್ಯದಲ್ಲಿ ಅದರ ವಾಚ್ಯಾರ್ಥ ಬಿಟ್ಟು ಗೂಡಾರ್ಥ ಯಾವುದೂ ಇಲ್ಲ. ಅದರ ವಿವರಣೆ ಬಿಟ್ಟು, ಹೆಚ್ಚಿನ ಸಂದೇಶವನ್ನು ವಾಕ್ಯ ಕಳಿಸುವುದಿಲ್ಲ. ಹಾಗಾಗಿ ಈ ವಾಕ್ಯವನ್ನು ಲೇಖಕನ ಉದ್ದೇಶವನ್ನು ನೆರವೇರಿಸುವ Lexis ಎನ್ನಬಹುದು. (ಯಾವ ಉಚ್ಚಾರಣೆ ತನ್ನ ನಿರೂಪಣೆಯನ್ನು ಮಾತ್ರ ಉದ್ದೇಶಿಸುತ್ತದೊ ಮತ್ತು ನಿಶ್ಚಿತವಾಗಿ ಪ್ರತಿಪಾದಿಸುವುದಿಲ್ಲವೋ ಅದನ್ನು Performative ಅನ್ನುತ್ತೇವೆ)

'ನಾನು ಸತ್ತೆ' ಅನ್ನುವ ವಾಕ್ಯ ಒಂದೇ ಬಾರಿಗೆ ಎರಡು ವೈರುಧ್ಯಗಳನ್ನು ಪ್ರತಿಪಾದಿಸುತ್ತದೆ. ಒಂದು ಸಾವು ಇನ್ನೊಂದು ಜೀವ. ಈ ವಾಕ್ಯ ಸುಳ್ಳೂ ಅಲ್ಲ, ಸತ್ಯವೂ ಅಲ್ಲ. ನಾನು ಸತ್ತೆ ಎನ್ನುವ ಈ ಮಾತನ್ನಾಡುವಾಗ ನಾನಿನ್ನೂ ಬದುಕಿದ್ದೇನೆ- ಎನ್ನುವುದನ್ನು ಅರ್ಥೈಸುತ್ತದೆ. ನಾನು ಸತ್ತಿದ್ದೇನೆ ಹಾಗು ನಾನು ಸತ್ತಿಲ್ಲ- ಇಲ್ಲಿ ದೃಢೀಕರಣ ಹಾಗು ನಿರಾಕರಣೆ ಎರಡೂ ಇದೆ. ಇದು ನಾವು ಇದುವರೆಗೂ ಕೇಳಿಲ್ಲದ ವರ್ಗಕ್ಕೆ ಸೇರುತ್ತದೆ. (ಸತ್ಯ/ಮಿತ್ಯ, ಹೌದು/ಇಲ್ಲ, ಸಾವು/ಬದುಕು ಇಂತಹ ವೈರುಧ್ಯಗಳ ವರ್ಗ)

ಈ ವಾಕ್ಯ ಆಶ್ಚರ್ಯಕರವಾದ ವಾಚ್ಯಾರ್ಥದ ಪುನರಾಗಮನವನ್ನು ಸಾರುತ್ತದೆ. ಹೀಗೆಂದರೆ ಸಾವು ನಮ್ಮ ಅರಿವಿನ ಸುಪ್ತಾವಸ್ಥೆಗೆ ತಳ್ಳಲ್ಪಟ್ಟಿದ್ದು, ಭಾಷೆಯ ಮೂಲಕ ಉಕ್ಕಿ ಪ್ರಕಟಪಡಿಸುತ್ತದೆ. ಹೀಗೆ ಪ್ರಕಟಗೊಳ್ಳುವ ಸಾವು ಗಾಯಗೊಂಡಿದೆ (traumatic) ಕೊನೆಯಲ್ಲಿ ವ್ಲಾಡಿಮಿರನು 'ಸಾವು' ಎಂದು ತನ್ನ ನಾಲಿಗೆಯಿಂದ ಒದರುತ್ತಾನೆಯೇ ಹೊರತು ತುಟಿಗಳಿಂದಲ್ಲ. ನಾನು ಸತ್ತೆ ಎನ್ನುವ ಪ್ರಯೋಗ ಒಂದು ನಿಷೇಧವನ್ನು ಪ್ರತಿಬಂಧವನ್ನು ಸಿಡಿಸುತ್ತದೆ ಮತ್ತು ಸಾವಿನ ಸಂಕೇತವನ್ನು ಮುಚ್ಚಿ ಒಂದು ಮನೋವಿಕಾರದ ಬಾಗಿಲನ್ನು ತೆರೆಯುತ್ತದೆ. ಈ ಮನೋರೋಗ ಹಿಂದಿನ ಸೂಚಕ (Significer ನ್ನು ಹೊಚ್ಚ ಹೊಸ ಸೂಚಿತವನ್ನಾಗಿಸುತ್ತದೆ) (Signified)

ಕೊನೆಯಲ್ಲಿ ಕಥೆ ರೋಗಿಯ ಬಾಯಿಂದ 'ಸತ್ತೆ ಸತ್ತೆ' ಅನ್ನುವ ಪದಗಳೊಂದಿಗೆ ಮುಕ್ತಾಯದ ಹಂತಕ್ಕೆ ಬರುತ್ತದೆ. ತಕ್ಷಣವೇ ಆತನ ದೇಹ Mr.Pನ (ವಿಜ್ಞಾನಿ) ಕೃತಿಯಿಂದ ತಪ್ಪಿಸಿಕೊಂಡು ಚೂರು ಚೂರಾಗಿ ಕೊನೆಯಲ್ಲಿ ಕುರೂಪದ, ಕೊಳೆತ, ನಾರುವ ಒಂದು ದ್ರವವಾಗುತ್ತದೆ.

– ಕೆ.ಬಿ.ಜ್ಯೋತಿ
jyogowdev@gmail.com

**ವಿಶೇಷ ಸೂಚನೆ**

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಂಶದಲ್ಲಿ ಟೈಪ್ ಮಾಡಿ prathispandha@gmail.comಗೆ ಕಳುಹಿಸುವುದು.

ಇಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ವಿಚಾರಗಳಿಗೆ ಲೇಖಕರೇ ಜವಾಬ್ದಾರರು
ಲೇಖನಗಳನ್ನು ಕಳುಹಿಸುವ ಲೇಖಕರು ಓದುಗರ ಅನುಕೂಲಕ್ಕಾಗಿ ಹೆಸರು, ವಿಳಾಸ, ದೂರವಾಣಿ ಸಂಖ್ಯೆ ಇ-ಮೇಲ್ ವಿಳಾಸವನ್ನು ನೀಡತಕ್ಕದ್ದು.

ಶಿಕ್ಷಣ ಎಂಬುದು ನಮಗೆ ಏನು ತಿಳಿದಿರುವುದಿಲ್ಲವೋ ಅದನ್ನೇ ಮುಖ್ಯವಾಗಿ ಹೊಂದಿರುತ್ತದೆ. – ಮಾರ್ಕ್‌ಟ್ವೇನ್

# ನಾವಿನ್ನೂ ದಾಸ್ಯದಲ್ಲೇ ಇದ್ದೇವೆ – ಕುವೆಂಪು ಅವರ 'ವಿಚಾರ ಕ್ರಾಂತಿಗೆ ಆಹ್ವಾನ'



ಸ್ವಾತಂತ್ರ್ಯ ದ ಕಲ್ಪನೆ ನಮ್ಮ ಬದುಕಿನಲ್ಲಿ ಸಾಕಾರಗೊಳ್ಳಬೇಕೆಂಬ ಹಂಬಲ ಸರ್ವಕಾಲಕ್ಕೂ ನಿಲ್ಲುವ ಶ್ರೇಷ್ಠ ಲೇಖಕರಲ್ಲಿ ಕಂಡು ಬರುವ ಪ್ರಮುಖ ಲಕ್ಷಣ. ಬೆಂಗಳೂರು ವಿಶ್ವವಿದ್ಯಾಲಯದ ಹತ್ತನೇ ಘಟಿಕೋತ್ಸವದ ಸಂದರ್ಭದಲ್ಲಿ ಕುವೆಂಪು ಅವರು ಮಾಡಿದ 'ವಿಚಾರ ಕ್ರಾಂತಿಗೆ ಆಹ್ವಾನ' ಭಾಷಣದಲ್ಲಿ ಭಾರತೀಯರ ದಾಸ್ಯದ ಮನಃಸ್ಥಿತಿಗೆ ಕಾರಣಗಳನ್ನು ಸೂಚಿಸುತ್ತಾರೆ.

ಬ್ರಿಟಿಷರಿಂದ ರಾಜಕೀಯ ಹಸ್ತಾಂತರವನ್ನು ಪಡೆದ ಭಾರತೀಯರು ನಂತರವೂ ಸಹ 'ಪ್ರಜಾಪ್ರಭುತ್ವವೆಂದು' ಹೇಳಿಕೊಳ್ಳುವ ವ್ಯವಸ್ಥೆ ಸೃಷ್ಟಿಸುತ್ತಿರುವ ಅಜ್ಞಾನದ ಸಂಕೋಲೆಗಳಲ್ಲಿ ಬಂಧಿತರಾಗಿರುವುದನ್ನು ತೀವ್ರವಾಗಿ ಟೀಕಿಸುತ್ತಲೇ ಈ ಸ್ಥಿತಿಯಿಂದ ತಪ್ಪಿಸಿಕೊಳ್ಳಲು ಯುವಕರಿಗೆ ಹಾದಿಯನ್ನು ತೋರಿಸುತ್ತಾರೆ.

ವಿದ್ಯಾವಂತ ಯುವ ಸಮೂಹ ಸ್ವಾತಂತ್ರ್ಯ ಜೀವನಕ್ಕೆ ತುಂಬಾ ಮುಖ್ಯವಾದ ಸ್ವಾರ್ಥ, ತ್ಯಾಗ ಮತ್ತು ಸರಳ ಜೀವನವನ್ನು ಗಾಳಿಗೆ ತೂರಿ ಹಣ ಸಂಪಾದಿಸಲು ಭ್ರಷ್ಟತೆಯ ಮಾರ್ಗಗಳನ್ನು ಪೋಷಿಸಿ, ಬೆಳೆಯಲು ಸಹಕರಿಸುತ್ತಿದ್ದಾರೆ. ಗಾಂಧೀಜಿಯನ್ನು ಮತ್ತೆ ಮತ್ತೆ ಕೊಂದು ಅವರ ಧ್ಯೇಯಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ.

"ಪರಕೀಯರ ಶೋಷಣೆಯಿಂದ ನಮ್ಮ ದೇಶ ಎಂತಹ ಬಡತನಕ್ಕೆ ಇಳಿದಿತ್ತು ಎಂದರೆ ಯಂತ್ರ ನಾಗರೀಕತೆಯಲ್ಲಿ ತುಂಬಾ ಮುಂದುವರೆದ ದೇಶಗಳಂತೆ ಮಹಾಮಹಾ ಕಾರ್ಖಾನೆಗಳ ಮತ್ತು ಕೈಗಾರಿಕೆಗಳ ಭಾರವನ್ನು ಹೊರುವ ತ್ರಾಣವೇ ಅದಕ್ಕಿರಲಿಲ್ಲ. ಆದರೂ ಅದರ ಹೆಗಲ ಮೇಲೆ ಅದನ್ನೆಲ್ಲಾ ಹೇರಿದೆವು. ಭೋಗದ ಮತ್ತು ಷೋಕಿಯ ವಸ್ತುಗಳ ತಯಾರಿಕೆಗೆ ಬಡ ರೈತರ ತೆರಿಗೆಯ ಧನವನ್ನು ವ್ಯಯ ಮಾಡಿದೆವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಭೋಗ ಜೀವನ ನಡೆಸುವ ಶ್ರೀಮಂತರ ಸುಖಕ್ಕಾಗಿ. ಬಡರೈತನನ್ನು ಹಿಂಡಿ ತಗೆದ ತೆರಿಗೆ ದವಸ ಧಾನ್ಯಗಳು ನಗರಗಳ ಶ್ರೀಮಂತ ವರ್ಗಕ್ಕೂ ಅಧಿಕಾರ ವರ್ಗದ ಧಾಳಾಧೂಳಿಗೂ ವ್ಯಯವಾಯಿತು. ಆಡಳಿತ ಮತ್ತು ನ್ಯಾಯ ವಿತರಣೆಗಳು ಬ್ರಿಟಿಷರ ಕಾಲದಲ್ಲಿದ್ದುದಕ್ಕಿಂತಲೂ ಜಟಿಲವಾಗಿ ಅನಕ್ಷರಸ್ಥ ಹಳ್ಳಿಗರು ಅಧಿಕಾರದ ಗಾಣಕ್ಕೆ ಸಿಕ್ಕಿ ನರಳುವಂತಾಯಿತು."

ನಮ್ಮವರ ಕೈಯಲ್ಲೇ ಪೋಷಿಸಲ್ಪಡುತ್ತಿರುವ ಈ ನವವಸಾಹಾತೀಕರಣಕ್ಕೆ ಮೂಲಕಾರಣಗಳನ್ನು ಕುವೆಂಪು ಮತಮೌಢ್ಯವೆಂಬ ನಿತ್ಯರೋಗದಲ್ಲಿ ಗುರುತಿಸುತ್ತಾರೆ.

"ನೂರಕ್ಕೆ ತೊಂಭತ್ತರಷ್ಟು ಅನಕ್ಷರಸ್ಥರಿರುವ ದೇಶದಲ್ಲಿ ಅದೆಂತಹ ಪ್ರಜಾಸತ್ತೆ ಸಾಧ್ಯವಾದೀತು? ಅದರಲ್ಲಿಯೂ ನಮ್ಮ ದೇಶ, ರಾಜರನ್ನು ಪ್ರತ್ಯಕ್ಷ ದೇವರೆಂದು ಪೂಜಿಸಿದ ದೇಶ; ಪುರೋಹಿತರನ್ನು ಭೂಸುರರೆಂದು ಆರಾಧಿಸಿದ ದೇಶ! ನಾಡಿನಾಡಿಗಳಲ್ಲಿ ಮಾತ್ರವಲ್ಲದೆ ಎಲುಬಿನಲ್ಲಿಯೂ ಐದುಸಾವಿರ ವರ್ಷಗಳಿಂದ ಸರ್ವವ್ಯಾಪಿಯಾಗಿದ್ದು ವರ್ಣ, ವರ್ಗ, ಮತ, ಜಾತಿ, ಪಂಥ, ಪಂಗಡ ಎಂಬ ನೂರಾರು ಭೇದಗಳಿಂದ ನರಳುತ್ತಿರುವ ದೇಶ!

ಎಲ್ಲಿಯವರೆಗೂ ಜಾತಿ, ಮತ, ಹೆಂಡ, ದುಡ್ಡು ಎಲ್ಲಿಯವರಗೂ ಚುನಾವಣೆಗಳನ್ನು ನಿರ್ಣಯಿಸುತ್ತಿರುತ್ತವೋ ಅಲ್ಲಿಯುವರೆಗೂ ಸ್ವಾರ್ಥಿಗಳು, ಸಮಯಸಾಧಕರು, ಗೂಂಡಾಗಳು, ಕಳ್ಳಸಂತೆಕೋರರು, ಕಳ್ಳಸಾಗಣೆ ಖದೀಮರು, ಚಾರಿತ್ರಹೀನರು ಪ್ರಜಾಸತ್ತೆಯ ಹುಸಿಹೆಸರಿನ ಹಿಂದೆ ಪ್ರಚ್ಛನ ಸರ್ವಾಧಿಕಾರ ನಡೆಸುತ್ತಾರೆ. ಭಾರತದ ಎಲ್ಲಾ ಅನಿಷ್ಟಗಳಿಗೆ ಮತಭಾವನೆ ಪ್ರಚೋದಿಸಿರುವ ಜಾತಿಬೇದ ಬುದ್ಧಿ, ಮತ್ತು ಚುನಾವಣೆ ಅನುಸರಿಸುತ್ತಿರುವ ಕುಟಿಲ ಕುನೀತಿ ಕಾರಣ."

ಕರ್ನಾಟಕದಲ್ಲಿನ ರಾಜಕೀಯ ಕ್ಷೋಭೆಗೆ ಕನ್ನಡಿಗರ ವಿಚಾರ ಶೂನ್ಯತೆ ಮತ್ತು ಜಾತಿ ಪ್ರಿಯತೆ ಮುಖ್ಯ ಕಾರಣಗಳೆಂದು ಕುವೆಂಪು ಬೆಟ್ಟು ಮಾಡಿ ತೋರಿಸುತ್ತಾರೆ. ಪ್ರಜಾಪ್ರಭುತ್ವವನ್ನು ಪೋಷಿಸಲು ಬೇಕಾದ ಸಂಸ್ಕೃತಿಯನ್ನು ಜಾತಿವ್ಯವಸ್ಥೆಯು ಹತ್ತಿಕ್ಕುತ್ತದೆ. ವಿಚಾರಹೀನರಾಗಿ ಆತ್ಮಾಭಿಮಾನ ಶೂನ್ಯವಾಗಿ ಬದುಕುವ ಅನಿವಾರ್ಯತೆಯನ್ನು ಹೇರುತ್ತದೆ.

# ಪ್ರಜಾ - ಪ್ರಭುತ್ವ

"ನಮ್ಮ ಜನ ಐದು ನಿಮಿಷ ಒಟ್ಟಿಗೆ ಸೇರಿ ವಿಶ್ವಾಸದಿಂದ ಇರುವುದಿಲ್ಲ. ಹೊಟ್ಟೆ ಕಿಚ್ಚು, ಗುಲಾಮರಾದವರ ದೇಹದ ಭಾಗ ಅಸೂಯಾಪರತೆಯಾಗಿ ಮುಂದುವರೆಯುತ್ತದೆ. ಮೂಢನಂಬಿಕೆ, ಜಾತೀಯತೆ, ದಾಸ್ಯ, ಪಾಳೆಯಗಾರಿಕೆ, ಪುರೋಹಿತರ ಶೋಷಣೆ ಅಜ್ಞಾನ ಭಾರತೀಯರನ್ನು ನಾಶ ಮಾಡಿದೆ"

– ವಿವೇಕಾನಂದ.

"ಪ್ರತ್ಯೇಕವಾದಿ ಮನಃಸ್ಥಿತಿಯೇ ಭಾರತೀಯ ಚೇತನದ ಅಧೋಗತಿಗೆ ಮೂಲಕಾರಣ. ಸಾಹಸಕ್ಕಿಳಿಯಬಲ್ಲ ಮನಸ್ಸು ಮತ್ತು ಸಂತಸ ಚಿಮ್ಮಬಲ್ಲ ಶಕ್ತಿಗಳೆರಡನ್ನೂ ಕೊಂದು ಹಾಕುವ ಭಯಂಕರ ಶಕ್ತಿ ಪ್ರತ್ಯೇಕ ಮನೋಭಾವಕ್ಕಿದೆ. ಇದು ಪರಂಪರಾಗತ ಗುಲಾಮರನ್ನು ರೂಪಿಸುವ ಸಂಚಿನಂತೆ ಕಾಣುತ್ತದೆ".

– ರಾಮ ಮನೋಹರ ಲೋಹಿಯ

ಪ್ರತ್ಯೇಕವಾದಿ ಮನಃಸ್ಥಿತಿಯು ಭಾರತೀಯರನ್ನು ಸ್ವಾರ್ಥಿಗಳನ್ನಾಗಿ ಮಾಡಿ, ಜಾತಿಯೆಂಬ ಅನಿಷ್ಟವನ್ನು ಬಿತ್ತಿ ಬೆಳೆಯಿತು. ಪರಿಣಾಮ, ಸಂಘಟಿತ ಶಕ್ತಿ ಬೆಳೆಯಲಿಲ್ಲ. ಆದ್ದರಿಂದ ಸಾವಿರಾರು ವರ್ಷಗಳ ಕಾಲ ಭಾರತೀಯರು ಪರಾಧೀನರಾದರು. ಇದಲ್ಲದೆ ಇಹದ ಬದುಕನ್ನು ಹಸನು ಮಾಡಿಕೊಳ್ಳುವಲ್ಲಿ ತಮಗೆ ತಾವೆ ಜವಾಬ್ದಾರರಾಗಲಿಲ್ಲ. ಸ್ವಾತಂತ್ರ್ಯ ಬಂದು ಅರವತ್ತಾರು ವರುಷಗಳಾಗುತ್ತಾ ಬಂದರೂ ಸ್ವಾಭಿಮಾನಿ, ಸ್ವಾವಲಂಬಿ ಬದುಕು ಅರಳುತ್ತಿಲ್ಲ. ಪ್ರಜಾಪ್ರಭುತ್ವ ತನ್ನ ಪ್ರಜೆಗಳಲ್ಲಿ ಆತ್ಮಗೌರವ, ಸ್ವಾತಂತ್ರ್ಯ ಪ್ರವೃತ್ತಿ ಬೆಳೆಸುತ್ತಿಲ್ಲ. ಏಕೆಂದರೆ ಕ್ಷೇಮವಾದಿ, ಹಿತಾಸಕ್ತಿ ರಾಜಕಾರಣ, ವ್ಯವಸ್ಥೆಯ ರೂಪದಲ್ಲಿ ಶೋಷಕ ಸ್ಥಾನದಲ್ಲಿದೆ. ಅದು ಶೋಷಿತರನ್ನು ಹೇಗೆ ಪಳಗಿಸಿ ಇಟ್ಟುಕೊಂಡಿದೆ ಎಂದರೆ ಶೋಷಕನಿಗೆ ಬೇಕಾಗಿರುವುದನ್ನು ಶೋಷಿತನೇ ಬೇಡುವಂತಹ ಅಪ್ರಜ್ಞಾಪೂರ್ವಕ ಮಾನಸಿಕ ಸ್ಥಿತಿಯನ್ನು ನಿರ್ಮಾಣಮಾಡಿದೆ. ಆದ್ದರಿಂದ ಜನ ಸಮೂಹ ಸೂತ್ರದ ಗೊಂಬೆಗಳಂತಿದ್ದಾರೆ. ನೈಜ ಸ್ವಾತಂತ್ರ್ಯಕ್ಕೂ ವೈಯುಕ್ತಿಕ ಬದುಕಿಗೂ ಪ್ರಭುತ್ವದ ಜೊತೆಗೆ ಪರಸ್ಪರ ಪೂರಕವಾದ ಸಹಬಾಳ್ವೆ ಇರಬೇಕೇಂಬ ತಿಳಿವು ಹಾಗು ಕ್ರಿಯಾಶೀಲತೆಯ ಜವಾಬ್ದಾರಿ ಇಲ್ಲದಾಗಿದೆ.

ಜಾಗತೀಕರಣದ ಇಂದಿನ ಕಾಲಘಟ್ಟದಲ್ಲಿ ಸಾರ್ವಜನಿಕ ಕ್ಷೇತ್ರ ಕುಬ್ಜವಾಗಿ ಸಾಮಾಜಿಕ ಜವಾಬ್ದಾರಿಯನ್ನು ಸ್ವೀಕರಿಸದ ಮಾರುಕಟ್ಟೆ ಶಕ್ತಿಗಳದೇ ಸಾರ್ವಭೌಮತ್ವವಾಗಿದೆ. ಅವರ ಸಂಪತ್ತಿನ ಒಡೆತನ ಒಂದುಕಡೆ, ದಟ್ಟ ದಾರಿದ್ರ್ಯದ ದೀನ ಸ್ಥಿತಿ ಮತ್ತೊಂದು ಕಡೆ ಸಮಾಜದ ನೆಮ್ಮದಿ ಹಾಗು ಸುಸ್ಥಿತಿಯನ್ನು ಕೆಡಿಸುತ್ತಿವೆ. ಐದು ವರ್ಷಗಳ ಹಿಂದೆ ಒಂದಂಕಿ ಲಕ್ಷದ ಒಡೆಯರಾಗಿದ್ದ ಜನಪ್ರತಿನಿಧಿಗಳು 2013ರ ಚುನಾವಣೆಯಲ್ಲಿ ನಾಲ್ಕಂಕಿ ಕೋಟ್ಯಾಧಿಪತಿಗಳೆಂದು ಘೋಷಿಸಿಕೊಂಡಿದ್ದಾರೆ. ಈ "ಜಾದು" ಹೇಗೆ ಸಾಧ್ಯ? ಪರಿಣಾಮ ಪ್ರಜಾಪ್ರಭುತ್ವದ ವ್ಯವಸ್ಥೆ ಹದಗೆಡುತ್ತಿದೆ. ಲೋಹಿಯಾರವರು ಹೇಳಿದಂತೆ, "ಪ್ರಜಾಪ್ರಭುತ್ವದ ಸರಳೀಕರಿಸಿದ ನಿಯಮಗಳ ಕೆಸರಿನಲ್ಲಿ ಭಾರತ ಹೊರಳಾಡುತ್ತಿದೆ." ಇದನ್ನು ಸರಿದಾರಿಗೆ ತರುವುದು ಹೇಗೆ? ಇದಕ್ಕೆ ಆಳುವ-ಆಳಿಸಿಕೊಳ್ಳುವವರಿಬ್ಬರಿಗೂ ಬೇಕಾದ ಚಿಕಿತ್ಸೆ, ಬದ್ಧತೆ ಇರಬೇಕಿದೆ. ಇಬ್ಬರೂ ಹೊಣೆಗಾರರಾಗಿ ತಮ್ಮ ತಮ್ಮ ಕರ್ತವ್ಯ ನಿರ್ವಹಿಸಬೇಕಾಗಿದೆ.

ನಾಯಕ ಎಂದರೆ ಜನರ ಬದುಕನ್ನು ನಿರ್ವಹಿಸುವವನು. ಅವರ ಸ್ವಾಭಿಮಾನ ಸಂಸ್ಕೃತಿಗೆ ಧಕ್ಕೆಯಾಗದಂತೆ ನಡೆದುಕೊಳ್ಳುವವನು. ನಾಯಕನಿಂದ ಜನತೆಗೆ– ಜನತೆಯಿಂದ ನಾಯಕನಿಗೆ ಚೈತನ್ಯ ಪ್ರವಹಿಸಬೇಕು. ಇಬ್ಬರಿಗೂ ಸಮಷ್ಟಿ ಹಿತದ ಪ್ರಜ್ಞೆ ಇರಬೇಕು. ನಾಯಕ ಜನರ ಭವಿಷ್ಯ ರೂಪಿಸುವ ಭರವಸೆ ಮೂಡಿಸಬೇಕು. ಹುಸಿ ಭರವಸೆಗಳನ್ನು, ಕ್ಷಣಿಕ ಆಮಿಷಗಳನ್ನು ಒಡ್ಡಬಾರದು. ಜನ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಾಣದೆ ಮುಂದೇನೆಂದು ಹತಾಶರಾದಾಗ,

ಅವರನ್ನು ಮುನ್ನಡೆಸುವ ಧೀ ಶಕ್ತಿ ತೋರಿಸಬೇಕು.

ಇಂತಹುದೇ ಒಂದು ಸನ್ನಿವೇಶದಲ್ಲಿ ಹೈದರಾಲಿ ತನ್ನ ಮಗ ಟಿಪ್ಪುವಿಗೆ ಹೇಳಿರುವ ಮಾತುಗಳು ಉಲ್ಲೇಖನೀಯ, " ಜನರ ದೌರ್ಬಲ್ಯ, ಮಕ್ಕಲುತನದಿಂದ ನಾಯಕತ್ವ ಪಡೆಯಬಹುದು, ಸಿಂಹಾಸನವನ್ನೂ ಗೆಲ್ಲಬಹುದು. ಆದರೆ ಶೀಘ್ರವಾಗಿ ಆ ಅಧಿಕಾರವನ್ನು ಜನರ ಪ್ರೀತಿಗೆ ಒಪ್ಪಿಸದೇ ಹೋದಲ್ಲಿ ನಾಯಕತ್ವ, ಈ ರಾಜ್ಯ ನಮ್ಮನ್ನು ಬಿಟ್ಟುಹೋಗುತ್ತದೆ" ಅಂದರೆ ನಾಯಕನಿಗೆ ಜನರ ವಿಶ್ವಾಸ, ಪ್ರೀತಿ ಗಳಿಸುವುದು ಅವರಲ್ಲಿ ಭರವಸೆ ಮೂಡಿಸುವುದು ಮುಖ್ಯ. ಆಳಿಸಿಕೊಳ್ಳುವವರಿಗೂ ಅರ್ಹತೆ, ಸಿದ್ಧತೆ, ತರಬೇತಿ ಅತ್ಯವಶ್ಯ.

"ಬಲಾಧಾರಿತ ಸರ್ಕಾರ ಮತ್ತು ನೀತಿ ಆಧಾರಿತ ಸರ್ಕಾರಗಳ ನಡುವೆ ಮನುಷ್ಯ ಆಯ್ಕೆ ಮಾಡಿಕೊಳ್ಳ'ಬೇಕಾಗಿದೆ. ಬಲಪ್ರಯೋಗವನ್ನು ವಜಾಮಾಡಿದರೆ ರಾಜ್ಯವನ್ನು ಉಳಿಸುವ ಏಕೈಕ ಶಕ್ತಿಯೆಂದರೆ ಧರ್ಮ (ನಿಯತಿ). ಧರ್ಮರಾಜ್ಯದ ಕಾವಲುಗಾರ ತಾನೇ ಆಗುವಂತೆ ಪ್ರತಿಯೊಬ್ಬ ಮನುಷ್ಯನನ್ನೂ ನೈತಿಕವಾಗಿ ತರಬೇತು ಗೊಳಿಸಬೇಕು" ಎಂಬುದೇ ಬುದ್ಧನ ಆಶಯವಾಗಿತ್ತು. ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವವನ್ನು ನಿರಂತರ ನವೀಕರಿಸಿಕೊಳ್ಳಬೇಕು, ಜೀವಂತವಾಗಿಟ್ಟುಕೊಳ್ಳಬೇಕು. ಆಚರಣೆಯ ಜಡವಾಗಿಸಬಾರದು.

– ಕೆ.ಆರ್.ಬಸವರಾಜು
9481492481

## ಸೃಜನಶೀಲ: "ಕರಿಮೊಗದ ಕೆಂಡ"

ಧಣಿಗಳ ಕಣದೊಳಗೆ ಬಣವೆಯನೇರಿ
ಹಸನು ಮಾಡಿದ ಕೈಗಳಿಗೆ;
ಮುಟ್ಟಿಸದೆ ನೀರ ಸುರಿದಿತ್ತು ತಂಬಿಗೆ.
ದುಡಿದು ದಣಿದ, ಹಸಿದ ಜೀವಿಯ
ಬೊಗಸೆಯೊಳಗೆ ತಪ್ಪನೆ ಉದುರಿತ್ತು
ಸುಡುವ ಮುದ್ದೆ.
ಕೈ ಸುಡುತ್ತಿದೆ ಮುದ್ದೆ; ಒಡಲುರಿಸುವುದು
ಹಸಿವು; ಉಣಲಾಗದು; ಬೇಗೆ, ಬಿಡುವಿಲ್ಲ.
ಬಾಯೊಳೂದುತ್ತ ಮುದ್ದೆಯೊಳು ತೋಡಿದ,
ಗುಳಿಯೊಳಗೆ ಇಳಿಸಿತ್ತು ಸೌಟು;
ಉರಿವ ಕೆಂಗಾರ.........!
ಬೆಳದೊಡಲ ಹಸಿವ ನೀಗಿಸಲೆಂದು
ಗಬಗಬನೆ ತುತ್ತು ಕಿತ್ತು ನುಂಗುತಿಹ
ತುತ್ತು ಎದೆಯೊಳು ಕಟ್ಟಿ ಬಿಕ್ಕು ಬಂದಿಹುದು
ಮುಗಿಲಿಗೆ ತೆರೆದ ಬಾಯೊಳಗೆ,
ಮುಟ್ಟಿಸದೆ ನೀರ ಸುರಿಸಿತ್ತು ತಂಬಿಗೆ;
ನೆತ್ತಿಗೇರಿದ ಖಾರ, ಹೊಟ್ಟೆಗಿಳಿಯದ ತುತ್ತು
ಸುಡುವ ಮುದ್ದೆಯ ಕಿಚ್ಚು
ಒಟ್ಟೊಟ್ಟಿಗೇ ಬಂದು ಮೈಕೊಡವಿ ಮಿಂಚಿತ್ತು
ತಂಬುಗೆಯ ಕಸಿದು ಗಟಗಟನೆ ಕುಡಿದಿತ್ತು.
ಕರಿಯ ಮೊಗದೊಳಗೆ ಉರಿವ ಕಂಗಳ ಬೆಂಕಿ
ಬಣವೆಯನು ಸುಟ್ಟು ಬೂದಿ ಮಾಡಬಹುದು.
ಬೇಲಿಯನು ಧಹಿಸಿ ಉರಿವ ಬೆಂಕಿಯ ಜ್ವಾಲೆ
ಕತ್ತಲೆಯ ನಾಡಿಗೆ ಬೆಳಕ ನೀಡಬಹುದು.
ಬಡಿಗೆಯನು ಹಿಡಿದು ಬೀಸುತ್ತ ನಡೆದು
ತಂಬಿಗೆಯನೆತ್ತಿ ಗದೆಯಂತೆ ಒಗೆದು
ತುಂಬಿ ಬಂದ ತಂಬಿಗೆಯ ಹಿಂಡನ್ನು
ತಡೆದಿತ್ತು ಕರಿಮೊಗದ ಉರಿಯು.
ತಣಿಸಲಾಗದೆ ಜ್ವಾಲೆಯನು
ತಪತಪನೆ ಉದುರಿ
ಆವಿಯಾದವು ತಂಬಿಗೆಯ ಹಿಂಡು.

– ಗೋವಿಂದಯ್ಯ ದ್ವಾರನಕುಂಟೆ

ಹೇಳುವುದರೊಳಗೆ ಕಾಲ ಕಳೆಯಿತು ಮಾಡುವುದ್ಯಾವಾಗಲೇ ಮನವೆ
– ಅಕ್ಕಿಹಾಳದ ಗೋವಿಂದದಾಸರು

## ನೋಮ್ ಚಾಮ್ಸ್ಕಿ : ಭಾಷೆ ಮತ್ತು ಸ್ವಾತಂತ್ರ್ಯ ಭಾಗ - ೨

ರೂಸೋ ಗುರುತಿಸುವಂತೆ ಮಾನವನ ಅಂತರ್ಯದ ಸಾಮರ್ಥ್ಯಗಳು ನಿರ್ದಿಷ್ಟ ಕ್ರಮದಲ್ಲಿ ಜೋಡಿಸಲ್ಪಟ್ಟಿರುತ್ತವೆ. ಹೊರಗಿನ ಅನುಭವದ ಪ್ರಚೋದನೆಗೆ ಸೆಳೆಯಲ್ಪಟ್ಟಾಗ ವಿಚಾರಗಳು ಜಾಗೃತವಾಗುತ್ತವೆ. ಅನುಭವ ಹೆಚ್ಚಾದ ಸ್ಥಿತಿಯಲ್ಲಿ ಹೊರಗಿನ ಪ್ರಚೋದನೆ ಇಲ್ಲದೇ ಕೂಡ ವಿಚಾರಗಳ ಉತ್ಪನ್ನವಾಗಬಹುದು. ಹಾಗೆಯೇ ಭಾಷೆ ಕೂಡ ಮಾನವನಿಗೆ ಒಂದು ನಿರ್ದಿಷ್ಟ ರೀತಿಯಲ್ಲಿಯೇ ಸಹಜ. ವಿಚಾರವಾದಿ ಭಾಷಾಶಾಸ್ತ್ರಜ್ಞರ ಈ ಮೂಲಭೂತ ಒಳನೋಟವನ್ನು 18ನೇ ಶತಮಾನದ ಅನುಭವವಾದಿ ಮನಃಶಾಸ್ತ್ರಜ್ಞರು (empiricist) ಮುಖ್ಯವೆಂದು ಪರಿಗಣಿಸಲಿಲ್ಲ.

ಮನುಷ್ಯರಿಗೆ ವಿಚಾರಮಾಡಲು ಭಾಷೆ ಅವಶ್ಯಕವೆಂದಾದರೆ ಭಾಷಾ ಕಲೆಯನ್ನು ತಿಳಿಯಲು ಹೇಗೆ ಯೋಚಿಸಬೇಕೆಂಬುದನ್ನು ಅರಿಯುವ ಅವಶ್ಯಕತೆ ಇನ್ನೂ ಹೆಚ್ಚಾಗಿ ಇದೆ. ಇಂತಹ ವಿಚಾರಗಳ ಸಂವಹನದಿಂದ ಮಾತ್ರವೇ ಮನಸ್ಸುಗಳ ನಡುವಿನ ಕಟ್ಟುವಿಕೆ ಸಾಧ್ಯ. ರೂಸೋ ಪ್ರಕಾರ, "ಸಾಮಾನ್ಯ ವಿಚಾರಗಳು ಬುದ್ಧಿಗೆ ಹೊಳೆಯುವುದು ಪದಗಳ ಸಹಾಯದಿಂದ, ಸೂಚನೆಗಳು ಮಾತ್ರವೇ ಅರ್ಥೈಸುವಿಕೆಯನ್ನು ಹಿಡಿದಿಡಲು ಸಾಧ್ಯ." ನವ ವೈಯಾಕರಣಿಗಳು ತಮ್ಮ ವಿಚಾರಗಳನ್ನು ವಿಸ್ತರಿಸುತ್ತಾ, ಪದಗಳನ್ನು ಸಾರ್ವತ್ರೀಕರಣಗೊಳಿಸುತ್ತಿದ್ದ ರೀತಿಯನ್ನು ಮತ್ತು 'ಮಾನವನ ಎಲ್ಲಾ ಚಿಂತನೆಗಳನ್ನು ಅಭಿವ್ಯಕ್ತ ಪಡಿಸಲು' ಮಾಡುತ್ತಿದ್ದ ಅವರ ಪ್ರಯತ್ನಗಳನ್ನು ಪರಿಗಣಿಸಲು ರೂಸೋಗೆ ಸಾಧ್ಯವಾಗದೇ ಹೋಯಿತು. ಯಾಕೆಂದರೆ ವಿಚಾರಗಳು ಹೆಚ್ಚಾದಂತೆಲ್ಲಾ, ದ್ವಿಗುಣಿಸುತ್ತಾ ಹೋದಂತೆಲ್ಲಾ, ಸಂವಹನ ಹತ್ತಿರವಾದ ಹಾಗೆಲ್ಲಾ ಅಸಂಖ್ಯಾತ ಚಿಹ್ನೆಗಳನ್ನು ಮತ್ತು ವಿಸ್ತೃತವಾದ ಭಾಷೆಯನ್ನು ಮಾನವರು ಹುಡುಕುವ ಸಾಧ್ಯತೆಗಳು ಹೆಚ್ಚು.

"ಸಾಂಸ್ಥೀಕರಣಗೊಂಡ ಭಾಷೆಗೆ ಪೂರ್ವ ಸ್ಥಾಪಿತ ಸಮಾಜ ಮುಖ್ಯವೇ ಅಥವಾ ಪೂರ್ವ ನಿರ್ಮಿತ ಭಾಷೆ ಸಮಾಜವನ್ನು ಸ್ಥಾಪಿಸುತ್ತದೆಯೋ?" ಎಂಬ ಒಗಟು ರೂಸೋವನ್ನು ಕಾಡಿದ್ದು ನಿಜ. ಆದರೆ Cartesianರು ಈ ಒಗಟನ್ನು ಹೀಗೆ ಒಡೆಯುತ್ತಾರೆ: ಪ್ರತಿಯೊಂದು ಜೀವಿಗೂ ನಿರ್ದಿಷ್ಟವಾದ ಲಕ್ಷಣಗಳು ಇರುತ್ತವೆ ಎಂದು ಅವರು ಭಾವಿಸುತ್ತಾರೆ. 'ಯಾಂತ್ರಿಕ ನಿಯಮ'ದಂತೆಯೇ 'ಸೃಜನಾತ್ಮಕ ನಿಯಮ'ವೂ ಮಾನವ ನಡವಳಿಕೆಯನ್ನು ನಿರ್ಧರಿಸುತ್ತದೆ. ಐತಿಹಾಸಿಕವಾಗಿ ವಿಕಸನದ ಕಾಲಗತಿಯಲ್ಲಿ ಭಾಷೆಯ ಉಗಮವನ್ನು ವಿವರಿಸುವ ಅವಶ್ಯಕತೆ ಅವರಿಗೆ ಕಂಡುಬರಲಿಲ್ಲ. ಖಚಿತವಾಗಿ ಮಾನವರ ಪ್ರಕೃತಿಯೇ ಭಿನ್ನ, ಅವರ ಬುದ್ಧಿವಂತಿಕೆಯನ್ನು ಬೇರೆ ಯಾವ ಜೀವಿಗಳಲ್ಲೂ ಕಾಣೆವು; ಈ ಬುದ್ಧಿವಂತಿಕೆಯನ್ನು ಸ್ಪಷ್ಟವಾಗಿ ಅವರ ಭಾಷಾ ಬಳಕೆ ಕಾಣಿಸುತ್ತದೆ. ಆದ್ದರಿಂದಲೇ ಭಾಷಾ ಅಧ್ಯಯನದಿಂದ ಮಾತ್ರವೇ ಮಾನವರ ಲಕ್ಷಣದ ಸೈದ್ಧಾಂತಿಕ ಅನ್ವೇಷಣೆ ಸಾಧ್ಯ.

ಸಾಮಾನ್ಯ ಭಾಷಾಶಾಸ್ತ್ರದ ಗಂಭೀರ ಚಿಂತಕ ಹಾಗು ಸ್ವಾತಂತ್ರ್ಯವಾದಿ ಮೌಲ್ಯಗಳ ಪ್ರತಿಪಾದಕ Wilhelm von Humboldt ಕೂಡ ತನ್ನ ಸಮಕಾಲಿನ ಚಿಂತಕರಾದ ರೂಸೋ ಮತ್ತು ಕಾಂಟ್‌ರಂತೆಯೇ ಮಾನವೀಯ ಲಕ್ಷಣದಲ್ಲಿ ಮುಖ್ಯವಾದ ಅಂತರ್ಗತ ಘನತೆಯನ್ನು ತುಂಬಾ ಗೌರವದಿಂದ ಪರಿಭಾವಿಸುತ್ತಾನೆ ಮತ್ತು ಈ ಸ್ಥಿತಿಯು ಲಭ್ಯವಾಗಲು ಸ್ವಾತಂತ್ರ್ಯವು ತೀರಾ ಅವಶ್ಯಕವೆಂದು ತಿಳಿಯುತ್ತಾನೆ. ವಿವೇಚನೆಯ ಅತ್ಯುನ್ನತ ಸ್ಥಿತಿಯಲ್ಲಿ ಮಾತ್ರವೇ ಮಾನವರ ಸರ್ವಮುಖವಾದ ಅಭಿವೃದ್ಧಿ ಆಗುತ್ತದೆ ಎಂದು ಅರಿಯುತ್ತಾನೆ. ಮಾನವರ, ಸಮುದಾಯಗಳ, ಅಥವಾ ಮನುಕುಲದ ಸಾಮರ್ಥ್ಯದ ಸಾಮರಸ್ಯ ಪೂರ್ಣ, ಶ್ರೀಮಂತ ಬೆಳವಣಿಗೆಯನ್ನು ತನ್ನ ಸಿದ್ಧಾಂತವನ್ನಾಗಿ ಪರಿಭಾವಿಸಿ ಅದನ್ನು *'Bildung'* ಎಂದು ಕರೆಯುತ್ತಾನೆ. ಸ್ವಾತಂತ್ರ್ಯದ ಪಕ್ವವಾದ ಬೆಳವಣಿಗೆಯು ಸ್ವಾತಂತ್ರ್ಯದಿಂದ ಮಾತ್ರವೇ ಸಾಧ್ಯ ಎನ್ನುತ್ತಾನೆ. Humboldtನ ಅಭಿಪ್ರಾಯದಲ್ಲಿ ಮಾನವರಲ್ಲಿನ ಬೌದ್ಧಿಕ ಮತ್ತು ನೈತಿಕ ನ್ಯೂನತೆಗಳೇ ದಾಸ್ಯಕ್ಕೆ ಕಾರಣ ಗಳು. ದಾಸ್ಯ ಬಂಧನಗಳು ಸಡಿಲಗೊಂಡಂತೆಲ್ಲಾ ಮಾನವರೊಳಗಿನ ಸ್ವಾತಂತ್ರ್ಯವು ಅರಳುತ್ತಾ ಹೋಗುತ್ತದೆ.

ಮೂಕಾಗಿರಬೇಕೋ ಜಗದೊಳು, ಜ್ವಾಕ್ಯಾಗಿರಬೇಕೋ
– ಕಡಕೋಳ ಮಡಿವಾಳಪ್ಪನವರು

ಮಾನವರ ನಿಜ ಪ್ರಕೃತಿಯನ್ನು ಅರಿಯದವರು ಮಾತ್ರವೇ ದಾಸರನ್ನು ಸೃಷ್ಟಿಸುತ್ತಾರೆ; ಮನುಷ್ಯರು ಯಂತ್ರದಂತೆ ಇರಲಿ ಎಂದು ಬಯಸುತ್ತಾರೆ. ಮಾನವರು ಮೂಲಭೂತವಾಗಿ ಸೃಜನಶೀಲರು, ಅನ್ವೇಷಕರು, ಸ್ವ-ಪರಿಪೂರ್ಣರು. ಈ ಲಕ್ಷಣಗಳು ಶ್ರೀಮಂತರ/ ಶ್ರೀಮಂತಿಕೆಯ ಸ್ವತ್ತಲ್ಲ. ಮಾನವರಿಗೆ 'ಮಾನವತನದ' ಹಕ್ಕನ್ನು ನಿರಾಕರಿಸುವುದು ಮಾನವ ಪ್ರಕೃತಿಗೆ ಮಾಡುವ ಅವಮಾನ. ಆದರೆ ಮಾನವನೊಳಗಿನ ಈ ಭಾವನೆಯನ್ನು ಅವರೊಳಗೆ ಜಾಗೃತಗೊಳಿಸುವುದು ಮಾತ್ರ ಸಾಧ್ಯ; ಹೊರಗಿಂದ ತುಂಬಲು ಸಾಧ್ಯವಿಲ್ಲ. ಭಾಷೆಯೂ ಸಹ ಹಾಗೆಯೇ, ಕಲಿಸಲು ಸಾಧ್ಯವಿಲ್ಲ; ಮನಸ್ಸಿನಲ್ಲಿ ಜಾಗೃತ ಗೊಳಿಸಬಹುದು. ಎಳೆಯೊಂದರ ಸಹಾಯ ನೀಡಬಹುದು, ಅದನ್ನು ಹಿಡಿದು ಭಾಷೆಯು ಮುಂದುವರೆಯಬೇಕಾಗುತ್ತದೆ.

ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಶಿಕ್ಷಣವೆಂದರೆ ಜ್ಞಾನ ಪ್ರಸರಣವಲ್ಲ; ಬದಲಾಗಿ ಪ್ರಜ್ಞೆಯನ್ನು ಎಚ್ಚರಿಸುವುದು. ಲ್ಯಾಟಿನ್ ಅಮೇರಿಕಾದ ತೀವ್ರಗಾಮಿ ಕ್ಯಾಥೋಲಿಕರು 'ಪ್ರಜ್ಞಾವಂತ, ಗಂಭೀರ ವಿಶ್ಲೇಷಕರಾಗಿ ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳುವಂತೆ ಜಡ, ಶೂಷಿತ ಕೆಳವರ್ಗದ ಜನರಿಗೆ' ಕಲಿಸುವಾಗ ಅವರ ಶಿಕ್ಷಣ ಪದ್ಧತಿಯಲ್ಲಿ ಈ ಸೂತ್ರವನ್ನು ಅಳವಡಿಸಿಕೊಂಡಿದ್ದಾರೆ. ನಮ್ಮ ಶಿಕ್ಷಣ ಪದ್ಧತಿ ಹೆಚ್ಚಾಗಿ ಸ್ಥಾಪಿತ ವ್ಯವಸ್ಥೆಯನ್ನೇ ಭದ್ರಪಡಿಸುವ ರೀತಿಯಲ್ಲಿ ಇದೆ. ಸೃಷ್ಟಿಸುವ, ಜಾಗೃತಗೊಳಿಸುವ ಕಡೆಗೆ ಇಲ್ಲ.

ಸ್ವತಂತ್ರ ಆಯ್ಕೆಯಿಂದ ಅಲ್ಲದೆ ಹೊರಗಿನ ಮಾರ್ಗದರ್ಶನ ಅಥವಾ ಬೋಧನೆಯಿಂದ ಮಾಡುವ ಯಾವುದೇ ಕಾರ್ಯವು ಮಾನವ ಲಕ್ಷಣಕ್ಕೆ ಅಪರಿಚಿತವಾದದ್ದು, ಯಾಂತ್ರಿಕವಾದದ್ದು. ತನ್ನ ಸ್ವ-ಆಸಕ್ತಿ, ಶ್ರಮ, ಶಕ್ತಿಯಿಂದ ಮಾಡದೆ, ಅನ್ಯರ ಬೋಧನೆಗಳಿಂದ ಮಾಡಿದ ಸಾಧನೆಯನ್ನು ಮೆಚ್ಚಬಹುದು ಆದರೆ ಅಂತಹ ವ್ಯಕ್ತಿತ್ವವನ್ನು ನಾವು ದ್ವೇಷಿಸುತ್ತೇವೆ. ಹಾಗಾಗಿಯೆ Humboldt ಮಾನವರನ್ನು ಯಾಂತ್ರಿಕರನ್ನಾಗಿ ಮಾಡುವ ರಾಜ್ಯ ಸ್ಥಾಪಿತ ಪ್ರಭುತ್ವವನ್ನು ಸಂಶಯಿಸುತ್ತಾನೆ.

-3-

ಕಾಲಾಂತರದಲ್ಲಿ ಗೌರವಿಸಲ್ಪಟ್ಟ ಈ ವಿಚಾರಗಳು ಸರಿಯಾಗಿವೆ ಮತ್ತು ಮೌಲ್ಯಯುತವಾಗಿವೆ. ಭವಿಷ್ಯದ ಸಮಾಜದ ಏಳಿಗೆಗೆ ಪೂರಕವಾಗಿವೆ. ಮಾನವನು ಸೃಷ್ಟಿಸುವ ಭೌತಿಕ ವಸ್ತುಗಳು, ಬೌದ್ಧಿಕ ಸಿದ್ಧಾಂತಗಳು, ಸಾಮಾಜಿಕ ಪದ್ಧತಿಗಳು ಮಾನವರ ನಡವಳಿಕೆಗಳಿಗೆ ಸಾಕ್ಷಿ ಒದಗಿಸುತ್ತವೆ. ಇತಿಹಾಸದ ಕಾಲಘಟ್ಟದಲ್ಲಿ ದಬ್ಬಾಳಿಕೆಯನ್ನು ಎತ್ತಿಹಿಡಿದ ಸಂಸ್ಥೆಗಳನ್ನು ಇಂದು ಸ್ವಾತಂತ್ರ್ಯದಿಂದ ಹುಟ್ಟಿದ ಬಾಂಧವ್ಯಗಳು ಎದುರಾಗುಬೇಕಾಗುತ್ತದೆ.

ದುರಾಸೆಯಿಂದ ಕೂಡಿದ ಬಂಡವಾಳ ಶಾಹಿಯು ಸಂಕೀರ್ಣ ಕೈಗಾರಿಕಾ ವ್ಯವಸ್ಥೆಯನ್ನೂ, ಮುಂದುವರೆದ ತಾಂತ್ರಿಕತೆಯನ್ನು ಸೃಷ್ಟಿಸಿದೆ ಹಾಗೆಯೇ ಪ್ರಜಾಪ್ರಭುತ್ವದ ಪದ್ಧತಿಗಳು ವಿಸ್ತರಿಸಲು ಹಾಗು ಉದಾರತೆಯ ಮೌಲ್ಯಗಳು ಹುಟ್ಟಲು ಪ್ರೇರೇಪಿಸಿದೆ ನಿಜ, ಆದರೆ ಈ ವ್ಯವಸ್ಥೆಗೆ ಮಿತಿಗಳಿವೆ. ಸಾಮುದಾಯಿಕವಾಗಿ ಮಾತ್ರವೇ ಅಭಿವ್ಯಕ್ತಪಡಿಸಲಾಗುವ ಮಾನವ ಅವಶ್ಯಕತೆಗಳನ್ನು ಈಡೇರಿಸಲು ಈ ವ್ಯವಸ್ಥೆ ಸೋತಿದೆ. ಕ್ರಿಯಾತ್ಮಕ ಮನುಷ್ಯರೆಂದರೆ ಅಧಿಕ ಸಂಪತ್ತು, ಅಧಿಕಾರವನ್ನು ಹೊಂದಿದವರು, ತಮ್ಮನ್ನು ತಾವು ಮಾರುಕಟ್ಟೆ ಕೇಂದ್ರಿತ ಸಂಬಂಧಗಳಿಗೆ, ಶೋಷಣೆ, ಪರಕೀಯ ಅಧಿಕಾರಕ್ಕೆ ಒಡ್ಡಿಕೊಳ್ಳುವವರು ಎಂದು ವ್ಯಾಖ್ಯಾನಿಸಿಕೊಳ್ಳುವ ಈ ವ್ಯವಸ್ಥೆ ಆಳದಲ್ಲಿ ಅಮಾನವೀಯ ಹಾಗು ಅಸಹನೀಯವಾಗಿದೆ. ಇಂತಹ ದಮನಕಾರಿ ಸಂಸ್ಥೆಗಳ ಉಗಮಕ್ಕೆ ಬೌದ್ಧಿಕ ಮತ್ತು ಸಾಂಸ್ಕೃತಿಕ ಬಡತನವೇ ಮುಖ್ಯ ಕಾರಣ. ಈ ನ್ಯೂನತೆ ಸೃಷ್ಟಿಯಾಗಲೂ ಸಹ ಬಂಡವಾಳಶಾಹಿ ಸಂಸ್ಥೆಗಳೇ ಜವಾಬ್ದಾರರಾಗಿವೆ.

ಈ ಕಾರ್ಪೊರೇಟ್ ಜಗತ್ತು ತನಗೆ ಬೇಕಾದ ಹಾಗೆ ಮ್ಯಾನೇಜರ್‌ಗಳನ್ನಾಗಲೀ, ತಾಂತ್ರಿಕ ಸಿಬ್ಬಂದಿ ಗಳನ್ನಾಗಲೀ ರೂಪಿಸಿ ತಮ್ಮ ಸಾಮ್ರಾಜ್ಯವನ್ನು ನಡೆಸಿಕೊಂಡು ಹೋಗಲು ಎಷ್ಟು ದಿನ ಸಾಧ್ಯವಾದೀತು? ತನಗೆ ಬೇಕಾದ ಹಾಗೆ ಮನುಷ್ಯರನ್ನು ಬಗ್ಗಿಸಿ ದುಡಿಸಿಕೊಳ್ಳಲು ಬಹಳ ದಿನ ಸಾಧ್ಯವಿಲ್ಲ. ಯಾಕೆಂದರೆ ಮಾನವರಲ್ಲಿ ಕಂಡು ಬರುವ ಈ ಪ್ಲಾಸ್ಟಿಕ್ ತರಹದ ಗುಣ/ ಬಾಗುವಿಕೆ ಸಹಜವಾದದ್ದಲ್ಲ. ಕೆಲವರಾದರೂ, ಮಾನವರಲ್ಲಿನ ಸಹಜ ಗುಣಗಳಾದ

ಬೌದ್ಧಿಕ ಬೆಳವಣಿಗೆ, ನೈತಿಕ ಪ್ರಜ್ಞೆಯ ಹೆಚ್ಚಳ, ಸಾಂಸ್ಕೃತಿಕ ಸಾಧನೆ ಹಾಗು ಸಮುದಾಯದ ಆಗುಹೋಗುಗಳಲ್ಲಿನ ಭಾಗವಹಿಸುವಿಕೆಗೆ ಗಮನ ಹರಿಸುತ್ತಾರೆ.

ಆಧುನಿಕ ಸಮಾಜ ಮತ್ತು ನಡವಳಿಕೆಯನ್ನು ಕುರಿತ ವಿಜ್ಞಾನಗಳನ್ನು ತೀವ್ರವಾಗಿ ಮತ್ತು ನಿಖರವಾಗಿ ಅಧ್ಯಯನ ಮಾಡುವ ಸಮಯ ಈಗ ಬಂದಿದೆ. ಭಾಷಾ ಅಧ್ಯಯನವು ನಿಯಮಗಳಿಂದ ಆಳಲ್ಪಟ್ಟವರ ನಡವಳಿಕೆಯನ್ನು ಸ್ವಲ್ಪಮಟ್ಟಿಗಾದರೂ ಅನ್ವೇಷಿಸಲು ಪ್ರಯತ್ನಿಸುತ್ತದೆ ಮತ್ತು ನಿಯಮಗಳಿಗೆ ಒಳಪಟ್ಟ ವ್ಯವಸ್ಥೆಯಲ್ಲಿ ಸ್ವತಂತ್ರವಾದ, ಸೃಜನಶೀಲವಾದ ಕ್ರಿಯೆಗಳನ್ನು ಹೇಗೆ ಕಟ್ಟಿಕೊಳ್ಳಬೇಕು ಎಂಬುದರ ಸೂಚನೆಗಳನ್ನು ಭಾಷಾ ಬಳಕೆಯ ಅಧ್ಯಯನದಿಂದ ತಿಳಿಯಬಹುದಾಗಿದೆ.

ನಮ್ಮೊಳಗಿನ ಜಾಗೃತಿಯಿಂದ ಹುಟ್ಟುವ ಭಾಷಾವ್ಯವಸ್ಥೆಯು ಅಮೂರ್ತವಾಗಿರುತ್ತದೆ. ಭಾಷೆ ಕಲಿಯುವ ಪ್ರತಿಯೊಬ್ಬರೂ ಅಪ್ರಜ್ಞಾಪೂರ್ವಕವಾಗಿಯಾದರೂ ಈ ಅಮೂರ್ತ ವ್ಯವಸ್ಥೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಭಾಷಿಕನಿಗೆ ಈ ವ್ಯವಸ್ಥೆಯನ್ನು ತನ್ನದನ್ನಾಗಿಸಿಕೊಳ್ಳಲು ಕಾಲ–ದೇಶದ ಅರಿವು ಮತ್ತು ವಿಶೇಷವಾದ ಮನಃಸ್ಥಿತಿ ಅಗತ್ಯ. ಇಂತಹ ನಡವಳಿಕೆಯ ಹುಟ್ಟು, ರಚನೆ, ಪರಿಸರದೊಂದಿಗೆ ಅದರ ಒಡನಾಟ ಮತ್ತು ಪ್ರಗತಿಯ ಅಧ್ಯಯನ ಭಾಷೆಯನ್ನು ತಿಳಿಯಲು ತೀರ ಅವಶ್ಯಕ. ಮಾನವರ ಆಂತರಿಕ ಸಾಮರ್ಥ್ಯ ಮತ್ತು ಅವಶ್ಯಕತೆಗಳ ತಿಳುವಳಿಕೆ ನಮಗೆ ಗೊತ್ತಾದರೆ, ಮಾನವರು ಕಲಿಯಬಹುದಾದ ಭಾಷೆಗಳು, ಕಲಾತ್ಮಕ ಅಭಿವ್ಯಕ್ತಿ, ವೈಜ್ಞಾನಿಕ ತಿಳುವಳಿಕೆ, ನೈತಿಕ ವ್ಯವಸ್ಥೆ, ಎಲ್ಲರೂ ಬಾಳಿ ಕ್ರಿಯಾತ್ಮಕವಾಗಬಹುದಾದ ಸಾಮಾಜಿಕ ವ್ಯವಸ್ಥೆಗಳನ್ನು ತಿಳಿಯಲು ಪ್ರಯತ್ನಿಸಬಹುದು. ಅಧ್ಯಯನಕ್ಕೆ ಸಮೃದ್ಧವಾಗಿ ಒದಗಿಬರುವ ಭಾಷೆ ಮಾನವ ಬುದ್ಧಿವಂತಿಕೆಯ ಮೊತ್ತ. ಶ್ರೀಮಂತ ಪರಂಪರೆಗಳು ಭಾಷೆಯನ್ನು ಬುದ್ಧಿಯ ಪ್ರತಿರೂಪವನ್ನಾಗಿ ಕಂಡಿವೆ.

'ಭಾಷೆ ಮತ್ತು ಸ್ವಾತಂತ್ರ್ಯ'ವನ್ನು ಕುರಿತಾದ ಅಂತರ್ ಸಂಬಂಧಗಳು ಇನ್ನೂ ನನ್ನನ್ನು ಚಕಿತಗೊಳಿಸುತ್ತಲೇ ಇವೆ. ಈ ನನ್ನ ಅಸ್ಪಷ್ಟ ಮತ್ತು sketchy ಪ್ರತಿಕ್ರಿಯೆಗಳು ಒಂದನ್ನು ಮಾತ್ರ ಸ್ಪಷ್ಟಪಡಿಸುತ್ತವೆ. ಮಾನವರು ಮತ್ತು ಅವರು ಕಟ್ಟಿಕೊಂಡಿರುವ ಸಾಮಾಜಿಕ ವ್ಯವಸ್ಥೆಯ ಬಗ್ಗೆ ನಾವು ತುಂಬಾ ಕಡಿಮೆ ತಿಳಿದಿದ್ದೇವೆ. ಮನಃಶಾಸ್ತ್ರೀಯ ತಿಳುವಳಿಕೆಯ ಭಾಗವಾಗಿ ಮಾನವರ ಭಾಷೆಯ ಅಧ್ಯಯನದಿಂದ ಸಮಾಜವು ಖಚಿತವಾಗಿ ಕ್ರಿಯಾತ್ಮಕವಾಗುವ ಅವಕಾಶಗಳು ಹೆಚ್ಚುತ್ತವೆ. ಹಾಗಂತ ಸಾಮಾಜಿಕ ಕ್ರಾಂತಿಗಳು ಅಧ್ಯಯನದ ಪ್ರತಿಫಲಗಳಾದ ಸಿದ್ಧಾಂತಗಳಿಗಾಗಿ ಕಾದು ಕೂರಬೇಕಿಲ್ಲ. ಸ್ವಾತಂತ್ರ್ಯ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ನಡೆಯುವ ಅಗಣಿತ ಹೋರಾಟಗಳಿಗೆ ಭಾಷೆಯನ್ನು ಕುರಿತಾದ ಸೈದ್ಧಾಂತಿಕ ಅನ್ವೇಷಣೆಗಳು ದೃಢದಾರಿಯನ್ನು ತೋರಬಲ್ಲ ಭವಿಷ್ಯಕ್ಕಾಗಿ ಎದುರು ನೋಡೋಣ.

– ಮುಗಿಯಿತು.

– ಡಾ॥ ಕೆ.ಬಿ.ಸರಸ್ವತಿ
n.sarassri@rediffmail.com

# ಜೇನ್ ಆಸ್ಟಿನ್ ಳ 'Pride and Prejudice' ಒಂದು ವಿಶ್ಲೇಷಣೆ

**"It is a truth universally acknowledged that Jane Austen's "*Pride and Prejudice*" is 'AN ALL TIME CLASSIC' since two hundred years."**

ಹೌದು. ಇಲ್ಲಿಗೆ ಸರಿಯಾಗಿ ಎರಡು ನೂರು ವರ್ಷಗಳ ಹಿಂದೆ ಪ್ರಕಟವಾದ ಜೇನ್ ಆಸ್ಟಿನ್‌ಳ ಕಾದಂಬರಿ 'ಪ್ರೈಡ್ ಅಂಡ್ ಪ್ರೆಜುಡಿಸ್' ಅಂದಿನಿಂದಲೂ ಅಸಂಖ್ಯಾತ ಓದುಗರಿಂದ ಓದಿಸಿಕೊಳ್ಳುತ್ತಾ ಬಂದಿದೆ. ಇತರೆ ಕಾದಂಬರಿಗಳಿಗಿಂತ ತೀರ ವಿಭಿನ್ನವಾದ, ಅಷ್ಟೇ ವಿಶಿಷ್ಟವಾದ ಈ ಕಾದಂಬರಿ ಬಹು ಮುಖ್ಯ ಎನಿಸುವುದು ಅದು ಪ್ರಕಟವಾಗುವಾಗ ಇದ್ದ ಇಂಗ್ಲಿಷ್ ಸಾಹಿತ್ಯದ ಸ್ಥಿತಿಗತಿಗಳೊಂದಿಗೆ ಅದನ್ನು ಅಭ್ಯಸಿಸಿದಾಗ.

ಇಂಗ್ಲಿಷ್ ಸಾಹಿತ್ಯ ಚರಿತ್ರೆಯಲ್ಲಿ 18 ಮತ್ತು 19ನೇ ಶತಮಾನವನ್ನು ಬಹುವಾಗಿ ಪ್ರಭಾವಿಸಿದ ಕಾದಂಬರಿ ಸಾಹಿತ್ಯ ಇಲ್ಲಿ ಅತ್ಯಂತ ಮುಖ್ಯವಾಗುತ್ತದೆ. ಏಕೆಂದರೆ 'Novel' ಎಂಬ ಸಾಹಿತ್ಯ ಪ್ರಕಾರಕ್ಕೆ ಒಂದು ರೂಪ ಬಂದಿದ್ದೇ ಆ ಸಮಯದಲ್ಲಿ. 'ಗೊಥಿಕ್ ರೊಮ್ಯಾನ್ಸಸ್', 'ಹಿಸ್ಟಾರಿಕಲ್', 'ಫ್ಯಾಂಟಸಿ', 'ಡಿಟೆಕ್ಟಿವ್', 'ಹಾರರ್', 'ಕ್ರೈಮ್ ಫಿಕ್ಷನ್' ಗಳೆಂಬ ವಿವಿಧ ರೂಪಗಳಲ್ಲಿ ಕಾದಂಬರಿಗಳು ಇಂಗ್ಲಿಷ್ ಸಾಹಿತ್ಯವನ್ನು ಶ್ರೀಮಂತಗೊಳಿಸಿದವು. ಬಹುತೇಕ ಈ ಎಲ್ಲಾ ಬರಹಗಳೂ ಹಣ, ಸಂಪತ್ತು, ಸ್ಥಾನಮಾನ, ಪ್ರೀತಿ, ಪ್ರಣಯ, ಚರಿತ್ರೆ, ಫ್ಯಾಂಟಸಿ, ಕೌತುಕ, ಭಯ, ಅಪರಾಧ, ನಗರ ಜೀವನ.....ದಂತಹ ಅಂಶಗಳ ಸುತ್ತ ಹೆಣೆದುಕೊಂಡಿದ್ದವು. ಜೊತೆಗೆ ಅವುಗಳ ಓದುಗರು ಶ್ರೀಮಂತ/ಅಧಿಕಾರಿ ವರ್ಗಕ್ಕೆ ಮಾತ್ರ ಸೇರಿದವರಾಗಿದ್ದರು. ಹಾಗೂ ಈ ಕಥನಗಳಲ್ಲಿ ಮಧ್ಯಮ ವರ್ಗದ ಜನಜೀವನಕ್ಕೆ ಯಾವುದೇ ಸ್ಥಾನವಿರಲಿಲ್ಲ.

ಇಂತಹ ಸಂದರ್ಭದಲ್ಲಿ ಮಧ್ಯಮ ವರ್ಗದ ಜನಜೀವನವನ್ನೇ ಕೇಂದ್ರೀಕರಿಸಿದ, ಅವರಿಗಾಗಿಯೇ ಬರೆದ ವಿಶಿಷ್ಟ ಮತ್ತು ಅನನ್ಯ ರೂಪದ ಕಾದಂಬರಿಗಳೊಂದಿಗೆ ಉದಯಿಸಿದ್ದು ಜೇನ್ ಆಸ್ಟಿನ್. ಮಧ್ಯಮ ವರ್ಗದ, ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನ, ಅವರ ಸ್ಥಿತಿಗತಿಗಳು, ರೀತಿನೀತಿಗಳು, ಸ್ವಭಾವ, ಆಸೆ-ಆಕಾಂಕ್ಷೆಗಳು, ತಮ್ಮ ಜೀವನದ ಬಗ್ಗೆ ಅವರಿಗಿರುವ ಧೋರಣೆಗಳು, ಅವರ ಜೀವನದಲ್ಲಿ ಪ್ರೀತಿ ಮತ್ತು ಮದುವೆ - ಇವೇ ಆಸ್ಟಿನ್ ಕೃತಿಗಳ ಪ್ರಧಾನ ಅಂಶಗಳು. ಆ ಕಾಲದ ಇತರೆ ಎಲ್ಲ ಬರಹಗಾರರು ಮರೆತಿದ್ದ ಈ 'domestic life' ಜೇನ್ ಕೃತಿಗಳಿಗೆ ವಸ್ತುವಾಯಿತು.

ಹೀಗಾಗಿಯೇ, ಕೇವಲ 42 ವರ್ಷಗಳ ಜೀವನದಲ್ಲಿ ಆಕೆ ತನ್ನ ಕೃತಿಗಳಿಗಾಗಿಯೇ, ತನ್ನದೇ ಆದ 'fictional ತಿಂಡಿಟಜ' ಒಂದನ್ನು ಕಟ್ಟಿಕೊಂಡು ಅದರ ಮೂಲಕ ನೈಜ ಪ್ರಪಂಚವನ್ನು ಅತ್ಯಂತ ಸಮರ್ಥವಾಗಿ, ಯಶಸ್ವಿಯಾಗಿ ಬಿಂಬಿಸಿದಳು. ಅವಳ ಬಹುತೇಕ ಎಲ್ಲ ಕೃತಿಗಳಲ್ಲಿ (ಮುಖ್ಯವಾಗಿ Sense and Sensibility ಮತ್ತು Emma) ಈ ಪ್ರಪಂಚವನ್ನು ಕಾಣಬಹುದು.

ಆಸ್ಟಿನ್‌ಳ ಮೇರು ಕೃತಿಯಾದ 'ಪ್ರೈಡ್ ಅಂಡ್ ಪ್ರೆಜುಡಿಸ್' ತನ್ನ ಕಥನ ಶೈಲಿ (narrative style), ಪಾತ್ರ ಚಿತ್ರಣ, ಪ್ರೀತಿ-ಮದುವೆ-ಡೊಮೆಸ್ಟಿಕ್ ಸಂಬಂಧಗಳಂತಹ ವಿಚಾರಗಳಿಂದಾಗಿ ಅತ್ಯಂತ ಜನಪ್ರಿಯವಾಗಿದೆ. 'Novels of Manners' ಎಂದೇ ಕರೆಯಲ್ಪಡುವ ಆಕೆಯ ಕೃತಿಗಳು ಅತೀ ಹೆಚ್ಚು ಸಂಖ್ಯೆಯ ಓದುಗರನ್ನು ಸಾಧಿಸುವಲ್ಲಿ ಯಶಸ್ವಿಯಾಗಿವೆ. ಅದಕ್ಕೆಂದೇ ಆಕೆಯ ಸಮಕಾಲೀನ ಬರಹಗಾರ ಸರ್ ವಾಲ್ಟರ್ ಸ್ಕಾಟ್ ಅವಳನ್ನು ಈ ರೀತಿ ಪ್ರಶಂಸಿಸುತ್ತಾನೆ: "ಅತ್ಯಂತ ಸಾಮಾನ್ಯವಾದ ಘಟನೆಗಳಿಗೆ, ಅಷ್ಟೇ ಸಾಮಾನ್ಯವಾದ ಪಾತ್ರಗಳಿಗೆ, ಜೀವನದ ಸಾಮಾನ್ಯ ಅಂಶಗಳಿಗೆ ಹತ್ತಿರವಿದ್ದು ಜೇನ್ ಆಸ್ಟಿನ್ ಅದೇ ಸಾಮಾನ್ಯ ಬದುಕಿನ, ಆದರೆ ನೈಜವಾದ, ಸ್ಫೂರ್ತಿದಾಯಕವಾದ ಚಿತ್ರಣವನ್ನು ಸಮರ್ಪಕವಾಗಿ ಚಿತ್ರಿಸಿದ್ದಾಳೆ."

1797ರಲ್ಲೇ 'First Impressions' ಎಂಬ ಶೀರ್ಷಿಕೆಯೊಂದಿಗೆ ಬರೆದ ಈ ಕಾದಂಬರಿಯನ್ನು 1813ರಲ್ಲಿ 'Pride and Prejudice' ಎಂಬ ಶೀರ್ಷಿಕೆಯೊಂದಿಗೆ ಪ್ರಕಟಿಸುತ್ತಾಳೆ. ಎರಡೂ ಶೀರ್ಷಿಕೆಗಳು ಕಾದಂಬರಿಯ ಕಥೆ, ಪಾತ್ರಗಳಿಗೆ ಹತ್ತಿರವಾಗಿವೆ.

ಲೋಕದೊಳಗೆ ಹೊಂದಿ ನಡೆಯುವುದನ್ನು ಕಲಿಯದವರು,
ಹಲವ ಕಲಿತರೂ ಅರಿವಿಲ್ಲದವರು. – ತಿರುಕ್ಕುರಳ್

ಅದರಲ್ಲೂ ಮುಖ್ಯ ಪಾತ್ರಗಳಾದ 'ಡಾರ್ಸಿ'ಯಲ್ಲಿ ಪ್ರೈಡ್ ಮತ್ತು 'ಎಲಿಜಬೆತ್'ಳಲ್ಲಿ ಪ್ರೆಜುಡಿಸ್ ಹಾಸುಹೊಕ್ಕಾಗಿವೆ.

ಬೇರೆ ಕಾದಂಬರಿಗಳಲ್ಲಿ ಸಿಗದಷ್ಟು ಹೆಚ್ಚು ಪಾತ್ರಗಳು ಇಲ್ಲಿವೆ. ಈ ಎಲ್ಲಾ ಪಾತ್ರಗಳ ವಿಶಿಷ್ಟ ರೀತಿಯ ಚಿತ್ರಣಗಳಿಂದ ಕಾದಂಬರಿ ಸಂಕೀರ್ಣ ವಾಗುತ್ತಾ ಹೋಗುತ್ತದೆ. ಆದರೆ ಇಲ್ಲಿ ಮುಖ್ಯವಾಗುವುದು ಡಾರ್ಸಿ ಮತ್ತು ಎಲಿಜಾ ನಡುವಿನ ಸಂಬಂಧದಲ್ಲಾಗುವ ಬದಲಾವಣೆಗಳು ಮತ್ತು ಬೆಳವಣಿಗೆಗಳು. ಏಕೆಂದರೆ, ಆರಂಭದಿಂದಲೂ ಡಾರ್ಸಿಯ 'ಪ್ರೈಡ್' ಎಲಿಜಾಳ 'ಪ್ರೆಜುಡಿಸ್'ಅನ್ನು ಪೋಷಿಸುತ್ತಾ ಹೋಗುತ್ತದೆ. ಕಥೆಯ ಹರಿವಿನಲ್ಲಾಗುವ ತಿರುವುಗಳಿಂದಾಗಿ ಅವಳಿಗೆ ಡಾರ್ಸಿ ಮೇಲಿನ ಬಿಮ್ಮು ಹೆಚ್ಚುತ್ತುಲೇ ಹೋಗುತ್ತದೆ. ಆದರೆ ಕಥೆಯ ಕೊನೆಯ ಘಟ್ಟದಲ್ಲಿ ಅವಳ ಅದೇ ಬಿಮ್ಮು ಡಾರ್ಸಿಯ ಹಮ್ಮನ್ನು ಒಪ್ಪಿಕೊಂಡು ಇಬ್ಬರೂ ಒಂದಾಗುವುದರೊಂದಿಗೆ ಕಥೆ ಕೊನೆಯಾಗುತ್ತದೆ.

ಈ main plot ನೊಂದಿಗೆ sub plot ನಲ್ಲಿ ಬರುವ ಜೇನ್–ಬಿಂಗ್ಲೆ ನಡುವಿನ ಪ್ರೀತಿ, ಚಾರ್ಲಟ್–ಕಾಲಿನ್ಸ್ ಮತ್ತು ಲಿಡಿಯಾ–ವಿಕ್‌ಹ್ಯಾಮ್ ಮದುವೆಗಳು ಕಥೆಯ ಹರಿವನ್ನು ಸಾಗಿಸುತ್ತವೆ.

ಕಥೆ ತುಂಬಾ ಸರಳ. ಇಡೀ ಕಥೆ ಸಾಗುವುದು ಇಂಗ್ಲೆಂಡಿನ ಲಾಂಗ್‌ಬರ್ನ್, ಮೆರಿಟನ್, ಲ್ಯಾಂಬ್‌ಟನ್, ಪೆಂಬರ್ಲಿ ಎಂಬ ಸಾಮಾನ್ಯ ಹಳ್ಳಿಪ್ರದೇಶಗಳಲ್ಲಿ. ಲಾಂಗ್‌ಬರ್ನ್‌ನ ಮಿಸ್ಟರ್ ಮತ್ತು ಮಿಸಸ್ ಬಿನೆಟ್ ದಂಪತಿಗಳಿಗೆ ಐದು ಜನ ಹೆಣ್ಣು ಮಕ್ಕಳು: ಜೇನ್, ಎಲಿಜಬೆತ್ (ಎಲಿಜಾ/ ಲಿಜ್ಜಿ), ಮೇರಿ, ಕ್ಯಾಥರಿನ್ (ಕಿಟಿ) ಮತ್ತು ಲಿಡಿಯಾ. ಗಂಡುಮಕ್ಕಳಿಲ್ಲವಾದ್ದರಿಂದ ಬಿನೆಟ್‌ನ ಆಸ್ತಿ ಅವನ ದೂರದ ಸಂಬಂಧಿ ವಿಲಿಯಂ ಕಾಲಿನ್ಸ್‌ಗೆ ಹೋಗುವುದೆಂಬ ಆತಂಕ, ದುಃಖ ಬಿನೆಟ್ ಕುಟುಂಬದ್ದು.

ಕಥೆ ಶುರುವಾಗುವುದೇ ಆಸ್ಟಿನ್‌ಳ ಎಲ್ಲ ಕಾದಂಬರಿಗಳ ಹಾಗೆ ಅತ್ಯದ್ಭುತವಾದ ಒಂದು ವಾಕ್ಯದೊಂದಿಗೆ: "It is a truth universally acknowledged, that a single man in possession of a good fortune must be in want of a wife". ನಾವೆಲ್‌ನ ಆರಂಭವೇ ಪ್ರೀತಿ, ಮದುವೆ ಮತ್ತು ಅಂತರ್ ಸಂಬಂಧಗಳೇ ಅದರ theme ಎಂಬುದನ್ನು ಸ್ಪಷ್ಟಪಡಿಸುತ್ತವೆ.

ಕಥೆಯ ಆರಂಭದಲ್ಲೇ ಲಾಂಗ್‌ಬರ್ನ್ ಪಕ್ಕದ ನೆದರ್‌ಫೀಲ್ಡ್ ಪಾರ್ಕ್‌ಅನ್ನು ಚಾರ್ಲ್ಸ್ ಬಿಂಗ್ಲೆ ಎಂಬ ಶ್ರೀಮಂತ ಗುಣವಂತನೊಬ್ಬ ಕೊಂಡುಕೊಂಡಿದ್ದಾನೆಂಬ ವಿಷಯ ತಿಳಿಯುವ ಮಿಸಸ್ ಬಿನೆಟ್, ಅವನಲ್ಲಿ ತನ್ನ ಹೆಣ್ಣುಮಕ್ಕಳಲ್ಲೊಬ್ಬಳಿಗೆ ಅಳಿಯನನ್ನು ಕಂಡುಕೊಳ್ಳುತ್ತಾಳೆ. ತನ್ನ ಐದೂ ಹೆಣ್ಣುಮಕ್ಕಳಿಗೆ ಮದುವೆ ಮಾಡುವುದೇ ತನ್ನ ಇಡೀ ಜೀವನದ ಒಂದೇ ಉದ್ದೇಶ ಎಂದುಕೊಂಡಿರುವ ಅವಳು ತಂಬಾ ಸೂಕ್ಷ್ಮಮತಿ. ಸಣ್ಣ ಸಣ್ಣ ವಿಚಾರಗಳಿಗೂ ಅತಿಯಾಗಿ ತಲೆ ಕೆಡಿಸಿಕೊಳ್ಳುವ, ಭಾವುಕಳಾಗುವ ಸಂವೇದನಾಶೀಲೆ. ತನ್ನ ಗಂಡನೊಂದಿಗೆ ಈ ವಿಚಾರವನ್ನು ಪ್ರಸ್ತಾಪಿಸಿ ಬಿಂಗ್ಲೆಯನ್ನು ಮನೆಗೆ ಆಹ್ವಾನಿಸುವಂತೆ ಕೇಳಿದರೂ ತಲೆಕೆಡಿಸಿಕೊಳ್ಳದ ಮಿಸ್ಟರ್ ಬಿನೆಟ್ ಮದುವೆ ವಯಸ್ಸಿನ ಐದು ಹೆಣ್ಣುಮಕ್ಕಳಿದ್ದರೂ ಜೀವನವನ್ನು ಗಂಭೀರವಾಗಿ ತೆಗೆದುಕೊಳ್ಳದ ವ್ಯಕ್ತಿ. ಹೆಂಡತಿಯ ಸ್ವಭಾವ ಗೊತ್ತಿದ್ದರೂ ಪದೇ ಪದೇ ಅವಳನ್ನು ರೇಗಿಸಿ ಸಂತೋಷ ಪಡೆಯುವವನು.

ಹೀಗೆ ಶುರುವಾಗುವ ಕಥೆಯ ಆರಂಭದಲ್ಲೇ ಎಲ್ಲ ಮುಖ್ಯ ಪಾತ್ರಗಳ ಪರಿಚಯವಾಗುತ್ತದೆ. ಅದು ಬಿಂಗ್ಲೆ ಮನೆಯಲ್ಲಿ ನಡೆಯುವ ಸಂತೋಷಕೂಟದಲ್ಲಿ. ಬಿಂಗ್ಲೆ ತನ್ನ ಆಕರ್ಷಕ ವ್ಯಕ್ತಿತ್ವದಿಂದ ಎಲ್ಲರನ್ನೂ ಸೆಳೆಯುತ್ತಾನೆ. ಅವನನ್ನು ಜೇನ್‌ಳ ಸೌಂದರ್ಯ, ನಡತೆಗಳು ಸೆಳೆಯುತ್ತವೆ. ಆದರೆ ಅವನ ಸ್ನೇಹಿತ, ಕಥೆಯ ಹೀರೊ, ಡಾರ್ಸಿ ಮಾತ್ರ ಎಲಿಜಾಳೊದಿಗೆ ನೃತ್ಯ ಮಾಡಲು ನಿರಾಕರಿಸುವುದರೊಂದಿಗೆ ತನ್ನ ಶ್ರೀಮಂತಿಕೆಯ ಹಮ್ಮನ್ನು ಪ್ರದರ್ಶಿಸುತ್ತಾನೆ. ಬಿಂಗ್ಲೆ ಜೇನ್ ಜೊತೆ ಎರಡು ಬಾರಿ ನರ್ತಿಸಿದರೂ ಡಾರ್ಸಿ ಎಲಿಜಾಳನ್ನೇ ಆಡಿಕೊಳ್ಳುತ್ತಾನೆ. ಮೊದಲೇ ಬಿಮ್ಮಿನಿಂದ ಕೂಡಿರುವ ಎಲಿಜಾ ಯಾವುದೇ ವ್ಯಕ್ತಿ/ ವಿಚಾರದ ಬಗ್ಗೆ ತಾನು ತಿಳಿದಿರುವುದೇ (ಒಂದು ವೇಳೆ ಅದು ಸುಳ್ಳಾಗಿದ್ದರೂ) ಸತ್ಯವೆಂದು ಕೊನೆಯವರೆಗೂ ನಂಬುವಂತಹವಳು. ಆದ್ದರಿಂದಲೇ ಡಾರ್ಸಿ ತನ್ನ ಬಗ್ಗೆ ಆಡಿದ ಮಾತುಗಳು ಕೇಳಿದಾಕ್ಷಣ ಆತ ಹಣದಲ್ಲಿ ಶ್ರೀಮಂತನೇ ಹೊರತು ಗುಣದಲ್ಲಿ ಅಹಂಕಾರಿ, ಗರ್ವಿ ಎಂದೆಲ್ಲ ಭಾವಿಸುತ್ತಾಳೆ. ಜೊತೆಗೆ ಕಥೆಯಲ್ಲಿ ಬರುವ

ವ್ಯಕ್ತಿ-ಸನ್ನಿವೇಶಗಳೂ ಡಾರ್ಸಿ ಮೇಲಿನ ಅವಳ ಬಿಮ್ಮನ್ನು ಹೆಚ್ಚಿಸುತ್ತಾ ಹೋಗುತ್ತವೆ.

ಹೀಗಾಗಿಯೇ, ಕಥೆಯ ಹರಿವಿನಲ್ಲಿ ಜೇನ್-ಬಿಂಗ್ಲೆ ನಡುವೆ ಪ್ರೀತಿ ಚಿಗುರಿ ಬೆಳೆಯುತ್ತಾ ಹೋದಂತೆ ಎಲಿಜಾ ಡಾರ್ಸಿಯನ್ನು ಪ್ರತಿ ವಿಚಾರದಲ್ಲೂ ವಿರೋಧಿಸುತ್ತಲೇ ಹೋಗುತ್ತಾಳೆ. ಆದರೆ ಆರಂಭದಲ್ಲಿ ಅವಳನ್ನು ತಿರಸ್ಕರಿಸಿದ್ದ ಡಾರ್ಸಿಯ ಹಮ್ಮು ಎಲಿಜಾಳ ಎದುರು ಸೋಲುತ್ತಾ ಹೋಗುತ್ತದೆ.

ಏನಾದರೂ ಮಾಡಿ ತನ್ನ ಮಕ್ಕಳಿಗೆ ಮದುವೆ ಮಾಡಿಯೇ ತೀರಬೇಕೆಂಬ ತಾಯಿ ಇಲ್ಲಿ ವಿಶಿಷ್ಟವಾಗಿ ಕಾಣುತ್ತಾಳೆ. ಬಿಂಗ್ಲೆಯ ತಂಗಿ ಕ್ಯಾರೊಲಿನ್ ಔತಣಕೂಟಕ್ಕೆ ಜೇನ್‌ಳನ್ನು ಆಹ್ವಾನಿಸಿದಾಗ ಆ ದಿನ ಜೋರು ಮಳೆ ಬರುವ ಹಾಗಿದ್ದರೂ ತಾಯಿ ಅವಳನ್ನು ಬಿಂಗ್ಲೆ ಮನೆಗೆ ಕಳಿಸುತ್ತಾಳೆ. ಅವಳ ಉದ್ದೇಶ ಇಷ್ಟೆ: ಮಗಳು ಮಳೆಯಲ್ಲಿ ನೆನೆದು ಹುಷಾರು ತಪ್ಪಿದರೆ ಒಂದಷ್ಟು ದಿನ ಆಕೆ ಬಿಂಗ್ಲೆ ಮನೆಯಲ್ಲೇ ಉಳಿಯಬಹುದು ಮತ್ತು ಇದು ಅವರಿಬ್ಬರ ನಡುವಿನ ಸಂಬಂಧವನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ ಎಂಬುದು. ಅದಕ್ಕಾಗಿಯೇ, ತನ್ನ ಮಗಳು ಕಾಯಿಲೆ ಬಿದ್ದರೂ ಪರವಾಗಿಲ್ಲ, ಆಕೆ ಮಳೆಯಲ್ಲೇ ಹೋಗಬೇಕೆಂದು ಒತ್ತಾಯಿಸುವುದು.

ಈ ನಡುವೆ ಲಾಂಗ್‌ಬರ್ನ್ ಮನೆಗೆ ಬರುವ ಕಾಲಿನ್ಸ್ ಎಲಿಜಾಳಲ್ಲಿ ಮದುವೆ ಪ್ರಸ್ತಾಪ ಮಾಡಿದಾಗ ಎಡಬಿಡಂಗಿಯಂಥ, ಬಾಯಿಬಡುಕ, ಅಷ್ಟೇನೂ ನಯ ನಾಜೂಕಿಲ್ಲದ ಕಾಲಿನ್ಸ್‌ನ ಸ್ವಭಾವ ಗೊತ್ತಿದ್ದ ಎಲಿಜಾ ಅವನನ್ನು ತಿರಸ್ಕರಿಸುತ್ತಾಳೆ. ಮಿಸಸ್ ಬಿನೆಟ್‌ಗೂ ಅವನೆಂಥವನೆಂದು ಗೊತ್ತಿದ್ದರೂ ಎಲಿಜಾ ಅವನನ್ನು ಮದುವೆಯಾಗಬೇಕೆಂದು ಹಠ ಹಿಡಿಯುತ್ತಾಳೆ. ಇಲ್ಲದಿದ್ದರೆ ಅವಳೊಂದಿಗೆ ಇನ್ನೆಂದೂ ಮಾತನಾಡುವುದಿಲ್ಲವೆಂದು ಹೆದರಿಸುತ್ತಾಳೆ. ಆದರೆ ತಂದೆ ಎಲಿಜಾಳ ಪರ ನಿಲ್ಲುತ್ತಾನೆ. ಅದೂ ಕೂಡ ಅವಳ ಮೇಲಿನ ಪ್ರೀತಿಯಿಂದಲೇ ಹೊರತು ಜವಾಬ್ದಾರಿಯಿಂದಲ್ಲ. ಇದು ಅವನು ಎಲಿಜಾಳಿಗೆ ಹೇಳುವ ಮಾತಿನಲ್ಲೇ ಸ್ಪಷ್ಟವಾಗುತ್ತದೆ: "ನೀನು ಅವನನ್ನು ಮದುವೆಯಾಗದಿದ್ದರೆ ನಿನ್ನ ತಾಯಿ ನಿನ್ನಿಂದ ಕೊನೆಯವರೆಗೆ ದೂರವಿರುತ್ತಾಳೆ. ಆದರೆ ಅವನನ್ನು ನೀನು ಮದುವೆಯಾದರೆ ನಾನು ನಿನ್ನಿಂದ ಕೊನೆಯವರೆಗೂ ದೂರವಿರಬೇಕಾಗುತ್ತದೆ!"

ಎಲಿಜಾಳಿಂದ ತಿರಸ್ಕೃತಗೊಂಡ ಕಾಲಿನ್ಸ್ ಅವಳ ಸ್ನೇಹಿತೆ ಚಾರ್ಲಟ್ ಲುಕಾಸ್‌ಳನ್ನು ಮದುವೆಯಾಗುತ್ತಾನೆ. ಇದರ ಮಧ್ಯೆ ಎಲಿಜಾಳಿಗೆ ವಿಕ್‌ಹ್ಯಾಮ್ ಎಂಬ ಮಿಲಿಟರಿ ಅಧಿಕಾರಿಯ ಪರಿಚಯವಾಗುತ್ತದೆ. ಅವನು ಹಿಂದೆ ಡಾರ್ಸಿಯ ತಂದೆಯ ಕೈ ಕೆಳಗಿದ್ದ ಅಧಿಕಾರಿಯ ಮಗ. ಡಾರ್ಸಿ ಮತ್ತು ಅವನು ಒಟ್ಟಿಗೇ ಬೆಳೆದವರು. ಒಳ್ಳೆಯವನಂತೆ ಸೋಗು ಹಾಕಿಕೊಂಡಿದ್ದ ಆತ ಡಾರ್ಸಿ ತನಗೆ ಮೋಸ ಮಾಡಿದ; ತನ್ನನ್ನು ಕೀಳಾಗಿ ನಡೆಸಿಕೊಂಡ; ಎಂದೆಲ್ಲಾ ಡಾರ್ಸಿ ವಿರುದ್ಧ ಹೇಳುವ ಪ್ರತಿ ಮಾತನ್ನು ಎಲಿಜಾ ನಂಬುತ್ತಾಳೆ. ಡಾರ್ಸಿ ಬಗ್ಗೆ ಮೊದಲೇ ಇದ್ದ ಅವಳ ಅತೃಪ್ತಿ ಕೋಪಕ್ಕೆ ತಿರುಗುತ್ತದೆ.

ಇದೇ ವೇಳೆ ಕ್ಯಾರೊಲಿನ್ ಜೇನ್‌ಗೆ ಪತ್ರವೊಂದನ್ನು ಬರೆದು ಅದರಲ್ಲಿ ತಾವೆಲ್ಲರೂ ಲಂಡನ್‌ಗೆ ಹೋಗುತ್ತಿರುವುದಾಗಿಯೂ, ಸಧ್ಯದಲ್ಲಿಯೇ ಹಿಂದಿರುಗುವ ಯಾವ ಆಲೋಚನೆಯಿಲ್ಲವೆಂದೂ, ಜೊತೆಗೆ ತನ್ನ ಅಣ್ಣ ಡಾರ್ಸಿಯ ತಂಗಿ ಜಾರ್ಜಿಯಾನಳನ್ನು ಮದುವೆಯಾಗುವ ಸೂಚನೆಯಿದೆಯೆಂದೂ ತಿಳಿಸುತ್ತಾಳೆ. ಇದನ್ನು ಓದಿದ ಜೇನ್ ಹತಾಶಳಾಗುತ್ತಾಳೆ. ಆದರೆ ಪಾರ್ಟಿಯಲ್ಲಿ ಜೇನ್-ಬಿಂಗ್ಲೆಯರ ನೃತ್ಯ ನೋಡಿಯೇ ಸ್ವರ್ಗವೇ ಕೈಗೆಟುಕಿದಷ್ಟು ಸಂಭ್ರಮಿಸಿದ್ದ ಅವಳ ತಾಯಿ ಅವಳಿಗಿಂತ ಹೆಚ್ಚು ಆತಂಕಕ್ಕೊಳಗಾಗುತ್ತಾಳೆ. ಆಗ ಬರುವ ಬಿನೆಟ್‌ಳ ಅಣ್ಣ-ಅತ್ತಿಗೆ, ಮಿಸ್ಟರ್ ಮತ್ತು ಮಿಸಸ್ ಗಾರ್ಡಿನರ್ ಜೇನ್ ಸ್ವಲ್ಪಕಾಲ ಜಾಗ ಬದಲಿಸಿದರೆ ಅವಳ ಮನಸ್ಸಿಗೆ ಸಮಾಧಾನವಾಗಬಹುದೆಂದು ಅವಳನ್ನು ಲಂಡನ್‌ಗೆ ಕರೆದೊಯ್ಯುತ್ತಾರೆ. ಜೊತೆಗೆ ಚಾರ್ಲಟ್ ತಂದೆ ಸರ್ ವಿಲಿಯಂ ಲುಕಾಸ್ ಕೂಡ ತನ್ನ ಮಗಳನ್ನು ನೋಡಲು ಹನ್ಸ್‌ಫರ್ಡ್‌ಗೆ ಎಲಿಜಾಳ ಜೊತೆ ಹೋಗುತ್ತಾನೆ.

ಕಾಲಿನ್ಸ್ ಅವರನ್ನು ತನ್ನ ಮನೆಯ ಹತ್ತಿರವಿದ್ದ ತನ್ನ ಒಡತಿ ಲೇಡಿ ಕ್ಯಾಥರಿನ್‌ಳ ರೋಸಿಂಗ್ಸ್ ಪಾರ್ಕ್ ಎಸ್ಟೇಟ್‌ಗೆ ಕರೆದೊಯ್ಯುತ್ತಾನೆ. ಡಾರ್ಸಿ ಲೇಡಿ ಕ್ಯಾಥರಿನ್‌ಗೆ ಸಂಬಂಧಿಯಾದ್ದರಿಂದ ಅಲ್ಲಿಗೆ ಬರುವ ಡಾರ್ಸಿ ಮತ್ತು ಅವನ ಕಸಿನ್ ಕರ್ನಲ್ ಫಿಟ್ಜ್‌ವಿಲಿಯಂರನ್ನು ಎಲಿಜಾ ಭೇಟಿ ಮಾಡುತ್ತಾಳೆ. ಅಲ್ಲಿ ಒಂದು ದಿನ ಕರ್ನಲ್ ಫಿಟ್ಜ್‌ವಿಲಿಯಂನಿಂದ ಡಾರ್ಸಿ ಬಿಂಗ್ಲೆಯನ್ನು ಅಷ್ಟೇನೂ ಉನ್ನತವಲ್ಲದ ಕುಟುಂಬದ ಹೆಣ್ಣೊಂದನ್ನು ಮದುವೆಯಾಗುವುದರಿಂದ ತಪ್ಪಿಸಿದ್ದಾನೆ

ಎಂಬುದನ್ನು ತಿಳಿಯುತ್ತಾಳೆ. ಅದು ತನ್ನ ಅಕ್ಕನ ಮದುವೆಯೇ ಇರಬೇಕೆಂದು ನಂಬುತ್ತಾಳೆ. ಹೀಗಾಗಿ ಡಾರ್ಸಿಯ ಬಗ್ಗೆ ಕೋಪಕ್ಕೆ ತಿರುಗಿದ್ದ ಅವಳ ಅತೃಪ್ತಿ ದ್ವೇಷವಾಗಿ ಪರಿಣಮಿಸುತ್ತದೆ.

ದುರಾದೃಷ್ಟವೆಂಬಂತೆ ಡಾರ್ಸಿ ಅಂದೇ ಎಲಿಜಾಳಲ್ಲಿ ತನ್ನ ಪ್ರೀತಿಯನ್ನು ವ್ಯಕ್ತಪಡಿಸುತ್ತಾನೆ. ಕಾದಂಬರಿಯ ನಿಜವಾದ climax ಎದುರಾಗುವುದು ಇಲ್ಲೇ. ಏಕೆಂದರೆ, ಮೊದಲೇ ಸಿಟ್ಟಿನಲ್ಲಿದ್ದ ಎಲಿಜಾ ಅದನ್ನು ಡಾರ್ಸಿಯ ಮೇಲೆ ತೀರಿಸುತ್ತಾಳೆ. ವಿಕ್‌ಹ್ಯಾಮ್‌ನನ್ನು ನಡೆಸಿಕೊಂಡ ರೀತಿ, ಮತ್ತು ಜೇನ್-ಬಿಂಗ್ಲೆ ಮದುವೆಯನ್ನು ತಡೆದುದಕ್ಕಾಗಿ ಅವನನ್ನು ದೂಷಿಸುತ್ತಾಳೆ. ಮರುದಿನ ಡಾರ್ಸಿ ಅವಳಿಗೆ ಒಂದು ದೀರ್ಘ ಪತ್ರವನ್ನು ಕೊಡುತ್ತಾನೆ. ಅದರಲ್ಲಿ "ನಾನು ಎಂದಿಗೂ ವಿಕ್‌ಹ್ಯಾಮ್‌ನನ್ನು ಕೆಟ್ಟದಾಗಿ ನಡೆಸಿಕೊಂಡಿಲ್ಲ; ಬದಲಿಗೆ ಅವನಿಗೆ ಬೇಕಾದ ಎಲ್ಲವನ್ನೂ ಕೊಟ್ಟೆ. ಆದರೆ ಪ್ರತಿಯಾಗಿ ಅವನು ನನ್ನ ತಂಗಿಯನ್ನು ಅವಳ ಆಸ್ತಿಯ ಸಲುವಾಗಿ ಕದ್ದೊಯ್ಯಲು ಪ್ರಯತ್ನಿಸಿದ್ದ. ಇನ್ನು ಜೇನ್ ಬಿಂಗ್ಲೆಯನ್ನು ಅಷ್ಟೊಂದು ಗಾಢವಾಗಿ ಪ್ರೀತಿಸುತ್ತಿದ್ದಾಳೆ ಎಂದು ತಿಳಿದಿರಲಿಲ್ಲ ವಾದ್ದರಿಂದಲೂ, ಜೊತೆಗೆ ಕ್ಯಾರೊಲಿನ್ ತನ್ನ ಮೇಲೆ ಒತ್ತಡ ಹಾಕಿದ್ದರಿಂದಲೂ ಅವರ ಮದುವೆ ನಿಲ್ಲಿಸಬೇಕಾಗಿ ಬಂತು" ಎಂದೆಲ್ಲ ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತಾನೆ.

ಈ ಪತ್ರ ಕಾದಂಬರಿಯ ಹರಿವಿಗೆ ಬಹುಮುಖ್ಯ ತಿರುವು ಕೊಡುತ್ತದೆ. ಏಕೆಂದರೆ, ಪತ್ರ ಓದಿದ ಮೇಲೆ ಎಲಿಜಾಳಿಗೆ ಡಾರ್ಸಿಯ ಮೇಲಿದ್ದ ದ್ವೇಷ ಮೃದುವಾಗುತ್ತದೆ. ನಂತರ ಲಂಡನ್‌ನಲ್ಲಿದ್ದ ಜೇನ್‌ಳೊಂದಿಗೆ ಲಾಂಗ್‌ಬರ್ನ್‌ಗೆ ವಾಪಸಾಗುತ್ತಾಳೆ. ತನ್ನ ಮತ್ತು ಡಾರ್ಸಿ ನಡುವೆ ನಡೆದ ಎಲ್ಲವನ್ನು ಜೇನ್‌ಗೆ ಹೇಳುತ್ತಾಳೆ. ವಿಕ್‌ಹ್ಯಾಮ್ ಎಂಥವನೆಂದು ಮನೆಯವರಿಗೆಲ್ಲ ಹೇಳಬೇಕೋ ಬೇಡವೋ ಎಂಬ ಗೊಂದಲದಲ್ಲಿರುವಾಗ ವಿಕ್‌ಹ್ಯಾಮ್ ಇದ್ದ ಮಿಲಿಟರಿ ಪಡೆ ಮೆರಿಟನ್‌ನಿಂದ ಬ್ರೈಟನ್‌ಗೆ ಸ್ಥಳಾಂತರಗೊಳ್ಳಲಿದೆ ಎಂದು ತಿಳಿದಾಗ ಇನ್ನು ಅವನಿಂದ ತಮಗೆ ಯಾವ ಅಪಾಯವೂ ಇಲ್ಲವೆಂದು ಸುಮ್ಮನಾಗುತ್ತಾಳೆ. ಆದರೆ ಲಿಡಿಯಾ ತಾನೂ ಕೂಡ ಬ್ರೈಟನ್‌ಗೆ ಹೋಗುತ್ತೇನೆಂದು ತಂದೆಯನ್ನು ಕೇಳಿದಾಗ ಎಲಿಜಾ ಮುಂದೆ ಆಗಬಹುದಾದ ಅಪಾಯದ ಬಗ್ಗೆ ಎಚ್ಚರಿಸುತ್ತಾಳೆ. ಆದರೆ ತಂದೆ ಅದಕ್ಕೆ ಗಮನ ಕೊಡದೆ ಲಿಡಿಯಾ ಅಲ್ಲಿಗೆ ಹೋಗಲು ಅನುಮತಿ ಕೊಡುತ್ತಾನೆ. ಇಲ್ಲಿಯೂ ಕೂಡ ಅವನ ಬೇಜವಾಬ್ದಾರಿ ವ್ಯಕ್ತವಾಗುತ್ತದೆ.

ಈ ವೇಳೆ ಪೂರ್ವ ನಿರ್ಧಾರದಂತೆ ಎಲಿಜಾ ಅಂಕಲ್ ಮತ್ತು ಅಂಟ್ ಗಾರ್ಡಿನರ್ ಜೊತೆ ಡಾರ್ಸಿಯ ಪೆಂಬರ್ಲಿ ಎಸ್ಟೇಟ್ ಬಳಿಯ ಲ್ಯಾಂಬ್‌ಟನ್ ಎಂಬಲ್ಲಿಗೆ ಪ್ರವಾಸ ಹೋಗುತ್ತಾಳೆ. ಪೆಂಬರ್ಲಿ ಬಂಗಲೆಗೆ ಭೇಟಿ ನೀಡುವ ಅವರಿಗೆ ಅಲ್ಲಿನ ಕೆಲಸದಾಕೆಯಿಂದ ಡಾರ್ಸಿಯ ಒಳ್ಳೆಯ ಗುಣಗಳೂ, ವಿಕ್‌ಹ್ಯಾಮ್ ಅವನಿಗೆ ಮಾಡಿದ ಅನ್ಯಾಯಗಳೂ ತಿಳಿಯುತ್ತವೆ. ಆಗ ಎಲಿಜಾಳಿಗೆ ತನ್ನ ತಪ್ಪಿನ ಅರಿವಾಗುತ್ತದೆ ಮತ್ತು ಡಾರ್ಸಿ ಬಗ್ಗೆ ತನಗಿದ್ದ prejudice ಕೇವಲ ಒಂದು ಕುರುಡು ನಂಬಿಕೆ ಎಂದು ಅರ್ಥಮಾಡಿಕೊಳ್ಳುತ್ತಾಳೆ. ಅದೇ ವೇಳೆಗೆ ಅಲ್ಲಿಗೆ ಬರುವ ಡಾರ್ಸಿ ತನ್ನ ತಂಗಿ ಜಾರ್ಜಿಯಾನಳನ್ನು ಎಲಿಜಾಗೆ ಪರಿಚಯಿಸುತ್ತಾನೆ. ಹಿಂದೆ ಅವಳನ್ನೂ ತಪ್ಪಾಗಿ ಅರ್ಥಮಾಡಿಕೊಂಡಿದ್ದ ಎಲಿಜಾಗೆ ಅವಳು ತಂಬಾ ಒಳ್ಳೆಯವಳೆಂದು ತಿಳಿಯುತ್ತದೆ.

(ಮುಂದುವರೆಯುತ್ತದೆ............)

– ಸಿದ್ಧರಾಮಯ್ಯ ಡಿ.ಎಂ
kalpasahyadri@gmail.com

Prathispanda Kannada Monthly literary cultural periodical
Title verification no.- KARKAN 22840/10/1/2012 TC

## ಪ್ರತಿಸ್ಪಂದದ ಆಶಯಗಳು

೧. ಅನ್ಯಭಾಷಾ ಸಾಹಿತ್ಯವನ್ನು ಮಾತೃಭಾಷೆಯಲ್ಲಿಯೇ ಗ್ರಹಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ.

೨. ಸಾಹಿತ್ಯವನ್ನು ಸೃಷ್ಟಿಸುತ್ತಿರುವ ಅಧಿಕಾರಗಳು, ಪ್ರಕ್ರಿಯೆಗಳು, ವಿಧಾನಗಳು ಮತ್ತು ದೃಷ್ಟಿಕೋನಗಳನ್ನು ಪರಿಚಯಿಸಿಕೊಳ್ಳುವುದು.

೩. ಸಾಹಿತ್ಯ/ಭಾಷೆ ಸೃಷ್ಟಿಸುತ್ತಿರುವ ಸಂಸ್ಕೃತಿ ಯನ್ನು ಅರ್ಥ್ಯಸಿಕೊಳ್ಳುವುದು.

೪. ಪಾಶ್ಚಿಮಾತ್ಯ ಸಾಹಿತ್ಯ ಪ್ರಾಕಾರಗಳಲ್ಲಿ ಕಂಡು ಬರುವ ಪರಿಕಲ್ಪನೆಗಳು, ಶೈಲಿ-ರೂಪಗಳು, ನೋಟ-ಧೋರಣೆಗಳು ಸ್ಥಳೀಯ ಸಾಹಿತ್ಯ ಸಂದರ್ಭದಲ್ಲಿ ಸೃಷ್ಟಿಸುತ್ತಿರುವ ಸಂಕರಗಳನ್ನು, ಬಹುತ್ವವನ್ನು ಅರ್ಥಮಾಡಿಕೊಳ್ಳುವುದು.

೫. ಪ್ರಸಕ್ತ ಜಾಗತಿಕ ಮಟ್ಟದಲ್ಲಿ ರಚಿತವಾಗುತ್ತಿರುವ ಸಾಹಿತ್ಯ/ಸಾಂಸ್ಕೃತಿಕ ಬರಹ/ಸಿದ್ಧಾಂತಗಳು ದೇಶೀಯ ಸಾಹಿತ್ಯದ ಮೇಲೆ ಬೀರುತ್ತಿರುವ ಪ್ರಭಾವಗಳನ್ನು ಅಭ್ಯಸಿಸುತ್ತಾ ಸಾಹಿತ್ಯದ ಬಗೆಗಿನ ಅಭಿರುಚಿಯನ್ನು ಗಾಢವಾಗಿಸಿಕೊಳ್ಳುವುದು.

೬. ಇತಿಹಾಸದ ಹರಿವಿನಲ್ಲಿ ಆಗಿ-ಹೋದ ಸಾಹಿತ್ಯ ಕೃತಿಗಳ ಪ್ರಸ್ತುತತೆಯನ್ನು ವಿವರಿಸಿಕೊಳ್ಳುವುದು.

೭. ಮಾನವ ಘನತೆಯನ್ನು ಎತ್ತಿ ಹಿಡಿಯುವ ಮಾನವೀಯ ಎಳೆಯ ನಿರಂತರತೆಯ ಬೆಳಕಿನಡಿಯಲ್ಲಿ ಸಾಹಿತ್ಯದ ನಿಜವಾದ ವಿದ್ಯಾರ್ಥಿಗಳಾಗುವುದು.

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur